

# ಸಿದ್ಧಗಂಗಾ



ಫೆಬ್ರವರಿ ೨೦೦೧



ಪೂಜ್ಯ ಶ್ರೀ ಶ್ರೀ ಅಟವೀ ಸ್ವಾಮಿಗಳ ೧೦೦ನೆಯ ಪುಣ್ಯಾರಾಧನೆ ಸಮಾರಂಭದ ಉದ್ಘಾಟನೆ



ಪೂಜ್ಯ ಶ್ರೀ ಶ್ರೀ ಉದ್ದಾನಶಿವಯೋಗಿಗಳ ೭೦ನೆಯ ಪುಣ್ಯಾರಾಧನೆ ಸಮಾರಂಭದಲ್ಲಿ
ಪರಮಪೂಜ್ಯ ಶ್ರೀ ಶ್ರೀಗಳವರಿಂದ ಅನುಗ್ರಹ ಭಾಷಣ



ಶ್ರೀಮಠದಲ್ಲಿ ಗಣರಾಜ್ಯೋತ್ಸವ



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೭ ಫೆಬ್ರವರಿ ೨೦೦೧ ಸಂಚಿಕೆ : ೨




**ಮುದ್ರಕರು :**
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭


ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ

ಒಳಪುಟಗಳಲ್ಲಿ..........




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೫೦೦/- |
| ಬಿಡಿ ಪ್ರತಿ | ರೂ. ೧೦.೦೦ |



# ಭೂಕಂಪ ಮತ್ತು ಜಾತ್ರೆ....

ಸಹಸ್ರಮಾನದ ಹೊಸತರಲ್ಲಿಯೇ ರಾಷ್ಟ್ರ ತತ್ತರಿಸುವಂಥ ಪ್ರಕೃತಿಯ ರುದ್ರಕೋಪ. ಕಳೆದ ಐವತ್ತು ವರ್ಷಗಳಲ್ಲಿ ಕಾಣದಂಥ ಭೀಭತ್ಸ ಭೂಕಂಪ. ಗುಜರಾತ್ ರಾಜ್ಯ ಜರ್ಜರಿತ. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸಾವು. ಮನೆ ಮಠಗಳ ನಾಶ. ಗ್ರಾಮ ಗ್ರಾಮಗಳೇ ಕಣ್ಮರೆ. ಧರೆ ಬಿರಿದು ಉರಿದ ದುರಂತ. ಜಗತ್ತಿನ ಕಣ್ಣೆಲ್ಲ ಗುಜರಾತ್‌ನತ್ತ. ಪ್ರಧಾನಿ ಶ್ರೀ ವಾಜಪೇಯಿಯವರಿಂದ ಜನಕೋಟಿಗೆ ಬಿನ್ನಹ. ನೆರವಿಗಾಗಿ ಪ್ರಾರ್ಥನೆ. ಪತ್ರಿಕೆಗಳ ತುಂಬ ಭೂಕಂಪದಿಂದಾದ ಕರುಳಿರಿಯುವ, ಕರುಳುರಿಯುವ ಚಿತ್ರಗಳು. ಸತ್ತ ಹೆಂಡತಿಗಾಗಿ ದುಃಖಿಸುವ ಗಂಡನ ಚಿತ್ರ, ತಂಗಿ ಸುರಕ್ಷಿತವಾಗಿ ಹಿಂದಿರುಗಲೆಂದು ಅಕ್ಕನ ಪ್ರಾರ್ಥನೆ, ಶಾಲಾಕಟ್ಟಡಡಿಯಲ್ಲಿ ಕಣ್ಮುಚ್ಚಿದ ಕಂದಮ್ಮಗಳು – ಚಿತ್ರ ನೋಡಿದರೆ ಹೃದಯಸ್ಥಂಭನವಾಗುವಷ್ಟು ದುಃಖದ ವಾರ್ತೆಗಳು. ವಿಜ್ಞಾನಕ್ಕೆ ಸವಾಲಾಗಿನಿಂತ ಪ್ರಕೃತಿಯ ವಿಕೋಪ. ದೇಶ ವಿದೇಶಗಳಿಂದ ಕೋಟಿ ಕೋಟಿ ಹಣದ ನೆರವಿನ ಆಗಮನ. ಏನಾದರೇನು? ಸತ್ತ ಜೀವಗಳು ಮರಳಿ ಬರಲಾರವು. ಭಾರತೀಯರು ಇಂಥ ವೇಳೆಯಲ್ಲಿ ಹತಾಶರಾಗಬಾರದು. ಬದುಕುಳಿದವರ ಬದುಕು ಅರಳುವಂತಹ ಸಾಹಸಮಾಡುವುದೊಂದೆ ನಾವು ಮಾಡಬಹುದಾದ ದೊಡ್ಡ ಮಾನವೀಯ ಸೇವೆ. ರಾಷ್ಟ್ರನಿರ್ಮಾಣ ಮಣಿಹ. ಗುಜರಾತನ್ನು ಮತ್ತೆ ಎತ್ತಿ ನಿಲ್ಲಿಸುವಂಥ ಸಂಕಲ್ಪಮಾಡಬೇಕು. ಏನೇನು ಮಾಡಬಹುದು? ಹೇಗೆಲ್ಲ ಸಹಕರಿಸಬಹುದು? ಆಪತ್ತಿನಲ್ಲಿರುವವರಿಗೆ ಅಪಾಯಮುಕ್ತರನ್ನಾಗಿಸಬಹುದು? ಅನಾಥ ಮಕ್ಕಳನ್ನೂ, ಬಂಧುಗಳನ್ನು, ಅಸಹಾಯಕರಾದವರನ್ನು, ಅಂಗವಿಕಲರಾದವರನ್ನು, ಬದುಕುವಾಸೆಯನ್ನೇ ಕಳೆದುಕೊಂಡವರನ್ನು ಪುನಃ ಜೀವನ ಪ್ರೇಮಿಗಳಾಗುವಂತೆ ಧೈರ್ಯತುಂಬುವುದಕ್ಕೆ ಎಲ್ಲರೂ ಸಕ್ರಿಯವಾಗಿ ಸ್ಪಂದಿಸಬೇಕು. ಸಹಕರಿಸಬೇಕು. ಪ್ರತಿ ಭಾರತೀಯ ತನ್ನ ಒಂದು ದಿನದ ಜೀವನದಲ್ಲಿ ಮಾಡುವ ಖರ್ಚಿನಷ್ಟು ಹಣವನ್ನು ನೊಂದವರಿಗೆ ನೀಡುವ ಮನಸ್ಸು ಮಾಡಬೇಕು. ಮಾನವೀಯತೆಯನ್ನು ಗೌರವಿಸುವ ಸದವಕಾಶವೀಗ.

**ಜಾತ್ರೆ**

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿನಡೆಯುವ ಜಾತ್ರೆಗೆ ನೂರುವರ್ಷ ತುಂಬಿದ ಹಿಗ್ಗು. ಜನಪರಸೇವೆಯಲ್ಲಿ ವರ್ಷದಿಂದ ವರ್ಷಕ್ಕೆ ಮುನ್ನಡೆದ ಸಾಂಸ್ಕೃತಿಕ ಭಾವೈಕ್ಯತೆಯ ಸಮಾವೇಶ. ಜನ-ಜಾನುವಾರುಗಳ ಉಲ್ಲಾಸದ ಉತ್ಸವಗಳ ಜಾತ್ರೆ. ದೈವಿಕ, ಧಾರ್ಮಿಕ, ಶೈಕ್ಷಣಿಕ, ಆಧ್ಯಾತ್ಮಿಕ ಕಾರ್ಯಕ್ರಮಗಳ ಸಮ್ಮೇಳನ. ವಸ್ತುಪ್ರದರ್ಶನವೆಂಬ ಬಯಲು ವಿಶ್ವವಿದ್ಯಾಲಯ. ಈ ಸಾರಿ 14.2.2001 ರಿಂದ 24.2.2001ರವರೆಗೆ ಜಾತ್ರೆ. ವಿವಿಧ ಉತ್ಸವಗಳು– ಶ್ರೀ ಗೋಸಲಸಿದ್ಧೇಶ್ವರ ಸ್ವಾಮಿ ಉತ್ಸವದಿಂದ ಆರಂಭಗೊಂಡು ಪಂಚ ಬ್ರಹ್ಮೋತ್ಸವದವರೆಗೆ. 22.2.2001ರಂದು ಬೆಳಿಗ್ಗೆ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವ, 23.2.2001ರಂದು ಬೆಳ್ಳಿಪಾಲಕಿ ಉತ್ಸವ. ಭೂಲೋಕವೇ ಕೈಲಾಸವಾಯಿತೆಂಬಂತಹ ಧಾರ್ಮಿಕ ಪವಿತ್ರ ಪರಿಸರ ಜಾತ್ರೆಯಲ್ಲಿ. ಲಿಂಗೈಕ್ಯ ಶಿವಯೋಗಿ ಪರಮಪೂಜ್ಯ ಶ್ರೀ ಮ । ನಿ । ಪ್ರ । ಅಟವೀ ಸ್ವಾಮಿಗಳವರಿಂದ, ಲಿಂಗೈಕ್ಯ ಶಿವಯೋಗಿ ಪರಮಪೂಜ್ಯ ಶ್ರೀ । ಮ ।ನಿ । ಪ್ರ। ಉದ್ದಾನಸ್ವಾಮಿಗಳವರಿಂದ ಬೆಳೆದು ಬಂದ ಸಿದ್ಧಗಂಗಾ ಜಾತ್ರೆ ಶ್ರೀ । ಮ । ನಿ । ಪ್ರ । ಡಾ । ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಕಾಯಕ-ದಾಸೋಹ ಗಳ ವಿಶಿಷ್ಟಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಮಹಾ ಸಮ್ಮೇಳನವಾಗಿ ಜನಕಲ್ಯಾಣೋತ್ಸವವಾಗಿ ನಡೆದಿರುವುದು ಜನತೆಯ ಭಾಗ್ಯವಿಶೇಷ.

ಜಾತ್ರಾರ್ಥಿಗಳಿಗೆಲ್ಲ ದಾಸೋಹ ಕೈಂಕರ್ಯವಿರುವ ಏಕೈಕ ಜಾತ್ರೆ.

– ಸಂಪಾದಕ







# ಆತ್ಮಬಲ

ಆತ್ಮಬಲ ಎಲ್ಲ ಬಲಗಳಿಗಿಂತ ಶಕ್ತಿಯುತವಾದುದು. ವಿದ್ಯೆ, ಐಶ್ವರ್ಯ, ಅಧಿಕಾರ, ಜಾತಿ, ಜನ, ದೇಹ, ಬಲಗಳು ಆತ್ಮಬಲದ ಮುಂದೆ ನಿಸ್ತೇಜ, ನಿಶ್ಶಕ್ತಗಳು. ಭರತಖಂಡಕ್ಕೆ ಸ್ವಾತಂತ್ರ್ಯ ಬಂದು ಅರ್ಧಶತಮಾನವಾಯಿತು. ಮಹಾತ್ಮ ಗಾಂಧೀಜಿಯವರು ರಾಷ್ಟ್ರಕ್ಕೆ ಸ್ವಾತಂತ್ರ್ಯವನ್ನು ತಂದು ಕೊಡುವಲ್ಲಿ ಆತ್ಮಬಲವನ್ನು ನಂಬಿ ನಡೆದರು. ಅವರಿಗೆ ಭಾರತೀಯ ಜೀವನದ ಪ್ರಾಣ ಜೀವಾಳವಾದ ಬ್ರಹ್ಮತೇಜೋಬಲದ ರಹಸ್ಯ ಅರಿವಾಗಿತ್ತು. ವಸಿಷ್ಠ ಮಹರ್ಷಿಗಳು ಕೌಶಿಕ ಮಹಾರಾಜರನ್ನು ಎದುರಿಸಿದ್ದು ಬ್ರಹ್ಮಬಲದಿಂದ ಎಂಬುದನ್ನು ಬಲ್ಲವರಾಗಿದ್ದರು. ನಾವಿಂದು ಆತ್ಮಬಲದಲ್ಲಿ ನಂಬಿಕೆಯನ್ನೇ ಕಳೆದುಕೊಂಡು ಹೆಜ್ಜೆಯಿಡುತ್ತಿದ್ದೇವೆ. ದೇಶವಿದೇಶಗಳಿಂದ ಸಾಲತಂದು ರಾಷ್ಟ್ರವನ್ನು ಕಟ್ಟುವವರಾಗಿದ್ದೇವೆ. ಎಲ್ಲಿಯತನಕ ಇದು ಸಾಗಬಹುದು? ನಾವು ಮಾಡಿದ ಕೋಟಿ ಕೋಟಿ ಸಾಲವನ್ನು ಯಾರು ತೀರಿಸಬೇಕು? ನಮ್ಮ ಆಯುಮಾನವಾದರೂ ಎಷ್ಟು? ನಾವಿಂದು ಮಾಡುವ ಸಾಲವನ್ನು ನಾವೇ ತೀರಿಸುತ್ತೇವೆ ಎಂಬ ಆತ್ಮವಿಶ್ವಾಸವಿದೆಯೇ? ಊಹೆಗೂ ಮೀರಿ ಸಾಲಮಾಡುವ ಪ್ರವೃತ್ತಿ ಮುಂದಿನ ಜನಾಂಗಕ್ಕೆ ಏನನ್ನು ಕೊಟ್ಟಂತಾಗುತ್ತದೆ? ಸಾಲದ ಹೊರೆಯಿಂದ ತತ್ತರಿಸುವಂತಾಗಲಾರದೆ? ಎಲ್ಲದಕ್ಕೂ ಸಾಲತರುವ ಚಾಳಿಯೇ ರಾಷ್ಟ್ರನೀತಿ ಯಾಗಬೇಕೆ?

ಮತ್ತೆ ಪರ್ಯಾಯವೇನು? ಇಂದಿನ ಭೋಗ ಜೀವನದ ಲಾಲಸೆಗೆ ಕಡಿವಾಣ ಹಾಕಬೇಕು. ದುಂದುವೆಚ್ಚ ನಿಲ್ಲಬೇಕು. ಸಾರ್ವಜನಿಕ ಹಣದ ಬಳಕೆಯಲ್ಲಿ 'ಎಚ್ಚರ'ವಿರಬೇಕು. 'ಯಾರದೋ ದುಡ್ಡು ಯಲ್ಲಮ್ಮನ ಜಾತ್ರೆ' ಎಂದಾಗಬಾರದು. ಜನನಾಯಕರ ಆಡಳಿತ ಹಿಡಿದಿರುವ ಮುಖಂಡರ ಜೀವನ ಶೈಲಿ ಬದಲಾಗಬೇಕು. ಇಟಲಿಯ ಮ್ಯಾಜಿನಿ ಮಹಾನುಭಾವರಂಥವರ ಸರಳ ಜೀವನ ನಮ್ಮದಾಗಬೇಕು. ಅಚ್ಚ ಭಾರತೀಯರಾದ ಲಾಲ್ ಬಹಾದ್ದೂರು ಶಾಸ್ತ್ರಿಗಳಂಥವರು ನಮ್ಮ ಆದರ್ಶವಾಗಬೇಕು. ಚರಿತ್ರೆಯನ್ನು ನಿರ್ಮಿಸುವವರು ಚಾರಿತ್ರ್ಯಶುದ್ಧಿಯುಳ್ಳವರಾಗಬೇಕು.

ಇಂದಿನ ಜೀವನ ನೈತಿಕ ಅವನತಿಯನ್ನು ಸಾಧಿಸಿದೆ. ಭ್ರಷ್ಟಾಚಾರ ಜೀವನದ ಹೆದ್ದಾರಿಯಾಗಿದೆ. ನೂರು ರೂಗಳಲ್ಲಾಗುವ ಕೆಲಸಕ್ಕೆ ಸಾವಿರ ರೂಗಳ ಬಿಲ್ಲು ತಯಾರಿಸುವ 'ವಿದ್ಯೆ'ಯನ್ನು ಕರಗತಮಾಡಿಕೊಳ್ಳಲಾಗಿದೆ. ಇದಕ್ಕೆಲ್ಲ ಕಾರಣ ಬದುಕಿಗೆ ಅಂಟಿಸಿಕೊಂಡಿರುವ ದೌರ್ಬಲ್ಯಗಳು– ಹಣ, ಅಧಿಕಾರ, ಭೋಗ ತೃಷೆಗಳು. ಕುಡಿತವಂತೂ ಪ್ರತಿಷ್ಠೆಯ ಸಂಕೇತವೆಂಬಂತಾಗಿದೆ. ಕುಡಿತಕ್ಕೆ ರಾಷ್ಟ್ರವನ್ನು ಒತ್ತೆಯಿಡುವಷ್ಟು ದಾಸರಾಗುತ್ತಿದ್ದಾರೆ. ಯುವಜನತೆ ಶಿಕ್ಷಕ, ವೈದ್ಯ, ಇಂಜಿನಿಯರ್, ಶಾಸಕ, ಸಚಿವ, ಅಧಿಕಾರಿ, ವಿದ್ಯಾರ್ಥಿ, ವ್ಯಾಪಾರಿ, ರೈತ, ಕಾರ್ಮಿಕ, ಸ್ತ್ರೀಯರೂ ಕೂಡ ಕುಡಿತದ ದೌರ್ಬಲ್ಯದಿಂದ ರಾಷ್ಟ್ರಶಕ್ತಿಯನ್ನು ಕುಗ್ಗಿಸುತ್ತಿದ್ದಾರೆ, ದೈವದತ್ತವಾಗಿ ತಮ್ಮಲ್ಲಿರುವ ಆತ್ಮಬಲದ ಬೆಳಕನ್ನು ಕಾಣದವರಾಗಿದ್ದಾರೆ.

ಇಂದಿನ ಶಿಕ್ಷಣವಂತೂ ಕೇವಲ ಹಣಗಳಿಕೆಯ ಮಾಧ್ಯಮವಾಗಿ ಮಾರ್ಪಡುತ್ತಿದೆ. ಮಾನವೀಯತೆಯನ್ನು ಬಿತ್ತುವುದಾಗಿಲ್ಲ, ಬಿತ್ತರಿಸುವುದಾಗಿಲ್ಲ. ವಿಜ್ಞಾನ-ತಂತ್ರಜ್ಞಾನಗಳನ್ನು ಆತ್ಮಶಾಂತಿಗೆ ಕಾರಣವಾಗುವ ಬದಲು ವಿನಾಶಕಾರಕ ಸಾಧನಗಳನ್ನಾಗಿ ಸೃಷ್ಟಿಸುವಲ್ಲಿ ಆಸಕ್ತರಾಗುತ್ತಿರುವುದು ಜಗತ್ತಿಗೇ ಕಳಂಕಪ್ರಾಯವಾಗಿದೆ. ನಮ್ಮ ಜೀವನಶೈಲಿ ಬದಲಾಗಬೇಕು. ದುಡಿಮೆಯಿಂದ ರಾಷ್ಟ್ರಕಟ್ಟಬೇಕು. ಸರಳಜೀವನ ಪ್ರೀತಿ ಕಾರ್ಯಗತವಾಗಬೇಕು. ಬಾಹ್ಯಬಲಕ್ಕಿಂತ ಆತ್ಮಬಲವನ್ನು ಬೆಳೆಸಿಕೊಳ್ಳಬೇಕು. ಸಹಸ್ರಾರು ವರ್ಷಗಳಿಂದ ಭಾರತ ಯಾವುದೇ ಧಾಳಿಗಳಿಗೆ ಸಿಕ್ಕಿದರೂ, ಉಳಿದು ಬಂದಿರುವುದು ತನ್ನ ಆತ್ಮಬಲದಿಂದ ಎಂಬುದನ್ನು ಮನಗಾಣಬೇಕು. ಯುವ ಜನತೆಯನ್ನು ಆತ್ಮವಾನ್ ಆಗಿ ಬೆಳೆಸುವ ದೃಷ್ಟಿನೀಡಬೇಕು.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಆಟ್ಟುದ ಆಡಲುಂಟೇ, ಸುಟ್ಟುದ ಸುಡಲುಂಟೇ ಅಯ್ಯಾ?*
*ಬೆಂದ ಮಡಕೆ ಮರಳಿ ಧರೆಯ ಕೊಡಬಲ್ಲುದೆ ಅಯ್ಯಾ?*
*ಕರ್ಪುರವ ಅಗ್ನಿನುಂಗಿದ ಬಳಿಕ ಕರಿ ಉಂಟೇ ಅಯ್ಯಾ?*
*ಶರಣನಲಿಂಗನುಂಗಿ, ಲಿಂಗವ ಶರಣನುಂಗಿ*
*ನದಿಯೊಳಗೆ ನದಿ ಬೆಳೆದಂತೆ ಬೆರೆದು*
*ಶುದ್ಧ ನಿರ್ಮಲವಾದ ಲಿಂಗೈಕ್ಯಂಗೆ*
*ಭಿನ್ನಾ ಭಿನ್ನವ ಕಲ್ಪಿಸುವ ಅಜ್ಞಾನಿಗಳ*
*ಎನಗೊಮ್ಮೆ ತೋರದಿರಯ್ಯಾ*
*ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!*

ಅಕ್ಕಿ ಕುದ್ದು ಅನ್ನವಾದ ಬಳಿಕ ಅದು ಮತ್ತೇನೂ ಆಗಬೇಕಿಲ್ಲ. ಅದರಂತೆ ಸುಟ್ಟದ್ದನ್ನು ಪುನಃ ಸುಡಬೇಕಾಗಿಲ್ಲ. ಮಣ್ಣಿನ ಗಡಿಗೆ ಆವುಗೆಯಲ್ಲಿ ಬೆಂದು ಹೊರಗೆ ಬಂದ ಮೇಲೆ ಪುನಃ ಅದು ಮಣ್ಣಿನಲ್ಲಿ ಕೂಡಲಾರದು. ಕರ್ಪೂರಕ್ಕೆ ಬೆಂಕಿ ಹಚ್ಚಿದ ಮೇಲೆ ಅದರ ಇದ್ದಲನ್ನು ಕಾಣಲಾರೆವು. ನದಿಯು ನದಿಯೊಳಗೆ ಕೂಡಿದನಂತರ ಅದು ಬೇರೆಯಾಗಿ ತೋರದು. ಹಾಗೆ ಶರಣನು ಲಿಂಗದಲ್ಲಿ ಕೂಡಿ ಒಂದಾದನಂತರ ಅವೆರಡರಲ್ಲಿಯ ಭೇದಭಾವವು ಅಳಿದು ಹೋಗುವುದು. ಹೀಗೆ ಲಿಂಗದೊಡನೆ ಅಭಿನ್ನತೆಯನ್ನು ಹೊಂದಿದವರಲ್ಲಿ ಭಿನ್ನತೆಯನ್ನು ಕಲ್ಪಿಸುವವರು ಅಜ್ಞಾನಿಗಳು. ಅಂಥವರನ್ನು ನನಗೆಂದೂ ತೋರಿಸಬೇಡ ದೇವರೆ ಎಂದು ಪ್ರಾರ್ಥಿಸಲಾಗಿದೆ.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ –
ಶ್ರೀ ತೋಂ.ಸಿ.ಕೈಂ.ಸೇ. ಸಂಘ, ಎಡೆಯೂರು – ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಗುರುವೆ ತನ ಚಿತ್ಕರಧಿ ಸೇವಾ ತೆರೆಗಳ ಲೀಲೆ
ಹರಹಿ ಆನಂದದ ಜಗಮೂಡಿ । ನಗುತಿಹುದು
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಯೋಗದ ಶ್ರೀದೊರೆಯೆ ಭವರೋಗದ ವೈದ್ಯನೆ
ತನ್ನ ಮಹಿಮೆ ತಿಳಿಯದೆ ಕುರುಡಾದೆ । ನಾ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗ ಪ್ರತ್ಯಂಗಗಳ ಪರಮ ಪಾವನ ಗೊಳಿಸಿ
ಲಿಂಗ ಭಾವದೊಳು ಬೆಳಗಿರುವ ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶುದ್ಧ ವಿನೋದಿಯೇ ಸಿದ್ಧ ಶಿವಾಂಬುಧಿಯೆ
ವಿಶ್ವವೆ ತಾನಾದ ಶಿವಸರ್ವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾರಸುಖಧಾರಿಧಿಯೆ ಶಿವಸುಕೃತದ ಮೇರುವೆ
ಸಂಸಾರ ಭ್ರಮರಹಿತ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೃಪೆಯ ಕಾಸಾರವೆ ಜಗದಗಲದ ಮಂಗಳವೆ
ಸಾರ ಸುರಾಳ ನಿರಾಳತೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನಿರದೆ ಸೋಜಿಗದ ಹೊನಲು ಬೆಳಕಾಗಿಹುದು
ತನ್ನರಿವಿನ ದಾರಿಯನು ತೋರಿಹುದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿತ್ಯ ಪರಿಪೂರ್ಣನೆ ಸಚ್ಚಿದಾನಂದನೆ
ಶಿವಯೋಗ ಸಾಧನೆಯ ಸೂರ್ಯನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿರ್ಲಿಪ್ತ ನಿರ್ಮಲ ನಿತ್ಯ ನಿರಂಜನ
ಸತ್ಯ ಸುಂದರ ಶಿವಲಿಂಗವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನು ವ್ಯಸನ ಮನ ವ್ಯಸನ ಧನ ವ್ಯಸನರಹಿತನೆ
ವ್ಯಸನವೇಳನು ಗೆದ್ದ ನಿರ್ವ್ಯಸನಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥





ತ್ರಾಹಿ ಮೃತ್ಯುಂಜಯ ನಿರಾಮಯ ನಿರಾಧಾರ ತ್ರಾಹಿ ನಿರುಪಮ ನಿರಾಲಂಬ ಚಿದ್ರಸಂಪೂರ ।
ತ್ರಾಹಿ ಅನತಜನನಿಕರ ಸುಖಕರಣ ಕೃಪಾಭರಣ ಭವ ತಿಮಿರಾರುಣ ॥
ತ್ರಾಹಿ ಷಡ್ವಿಧಲಿಂಗಸಂಗ ಸದ್ಗುಣತುಂಗ ತ್ರಾಹಿ ನಿತ್ಯಕರುಣಾಪಾಂಗ ।
ತ್ರಾಹಿ ಗುರುಸಿದ್ಧಯತಿರಾಯ ಜಿತಮಾಯ ಚಿತ್ಕಾಯ ರಾಜಾರ್ಧಶೇಖರ ಪುರಹರಾ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರು ಶ್ರೀ ಶ್ರೀ ಶಿವಕುಮಾರಸ್ವಾಮಿಗಳು

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1922ನೇ ಶ್ರೀ ವಿಕ್ರಮನಾಮ ಸಂವತ್ಸರ

**ಮಾಘ ಬಹುಳ ಸಪ್ತಮಿ ಬುಧವಾರ 14-2-2001**

| | | |
|---|---|---|
| ಶ್ರೀ ಗೋಸಲ ಸಿದ್ಧೇಶ್ವರ ಸ್ವಾಮಿ ಉತ್ಸವ | ಬೆಳಿಗ್ಗೆ 8-00 | ಶ್ರೀ ಹೆಚ್. ಗಂಗಾಧರನ್, ವಕೀಲರು ಮತ್ತು ಮಾಜಿ ಶಾಸಕರು, ಮೈಸೂರು ಇವರ ಸೇವೆ. |
| ವೃಷಭ ವಾಹನ | ಸಂಜೆ 7.00 | ಕಂಟ್ರಾಕ್ಟರ್ ಲಿಂ. ಡಿ. ಚಂದ್ರಶೇಖರಯ್ಯನವರ ಕುಟುಂಬದವರ ಸೇವೆ ಮತ್ತು ಮಾದೇನಹಳ್ಳಿ ಲಿಂ. ಎಂ. ಮಲ್ಲಿಕಾರ್ಜುನಯ್ಯನವರ ಕುಟುಂಬದವರ ಸೇವೆ. |
| ರಾವಣ ವಾಹನ | ರಾತ್ರಿ 8.30 | ಶ್ರೀಮಠದ ವತಿಯಿಂದ |

**ಮಾಘ ಬಹುಳ ಅಷ್ಟಮಿ ಗುರುವಾರ 15-2-2001**

| | | |
|---|---|---|
| ಸಿಂಹವಾಹನ | ರಾತ್ರಿ 7.00 | ಹೊಸಹಳ್ಳಿ ಶ್ರೀ ಎಸ್.ಸಿ. ಸಿದ್ಧಗಂಗಯ್ಯನವರ ಸೇವೆ. |
| ಗಜವಾಹನ | ರಾತ್ರಿ 8.30 | ಕಡಬಗೆರೆ ಲಿಂ. ಕೆ. ರುದ್ರಯ್ಯನವರ ಕುಟುಂಬದವರ ಸೇವೆ ಹಾಗೂ ತೊಂಡಗೆರೆ ಲಿಂ. ಪ. ಈಶ್ವರಯ್ಯನವರ ಜ್ಞಾಪಕಾರ್ಥ ಮಗ ಶ್ರೀ ಟಿ.ಎಸ್. ಸಿದ್ಧಗಂಗಯ್ಯನವರ ಸೇವೆ. |

**ಮಾಘ ಬಹುಳ ನವಮಿ ಶುಕ್ರವಾರ 16-2-2001**

| | | |
|---|---|---|
| ಹುಲಿವಾಹನ | ಸಂಜೆ 7.00 | ಕ್ಯಾತ್ಸಂದ್ರ ಲಿಂ.ಕೆ.ವಿ. ಗುಬ್ಬಣ್ಣನವರ ಕುಟುಂಬದವರ ಸೇವೆ. |
| ನಂದಿವಾಹನ | ರಾತ್ರಿ 8.30 | ಹರ್ತಿ ಲಿಂ. ಸಿದ್ದಣ್ಣನವರ ಕುಟುಂಬದವರ ಸೇವೆ. |

**ಮಾಘ ಬಹುಳ ದಶಮಿ ಶನಿವಾರ 17-2-2001**

| | | |
|---|---|---|
| ಅಶ್ವವಾಹನ | ಸಂಜೆ 7.00 | ಶ್ರೀ ರೇವಣ್ಣ ಮತ್ತು ಮಕ್ಕಳು ನಾಯಂಡಹಳ್ಳಿ ಇವರ ಸೇವೆ. ಮತ್ತು ತಿಮ್ಮನಾಯಕನಹಳ್ಳಿ ಲಿಂ. ಕಂಬಾಳು ಸಿದ್ಧಪ್ಪನವರ ಮಕ್ಕಳ ಸೇವೆ. |
| ನವರಂಗ ಪಾಲಕಿ ಉತ್ಸವ | ರಾತ್ರಿ 8.30 | ಸಾದರ ಸಮಾಜದವರ ಸೇವೆ. |



### ಮಾಘ ಬಹುಳ ಏಕಾದಶಿ ಭಾನುವಾರ 18-2-2001

| | | |
|---|---|---|
| ಹುತ್ತದ ವಾಹನ | ಸಂಜೆ 7.00 | ಶ್ರೀ ಎಂ. ಮಾದಯ್ಯ, ಮಮತ ಫೈನಾನ್ಸ್ ಬಳೆಪೇಟೆ, ಬೆಂಗಳೂರು ಇವರ ಸೇವೆ. |

### ಮಾಘ ಬಹುಳ ದ್ವಾದಶಿ ಸೋಮವಾರ 19-2-2001

| | | |
|---|---|---|
| ನವಿಲು ವಾಹನ | ಸಂಜೆ 7.00 | ಶೆಟ್ಟಹಳ್ಳಿ ಲಿಂ. ರುದ್ರಪ್ಪನವರ ಕುಟುಂಬದವರ ಸೇವೆ ಮತ್ತು ಹೊನ್ನುಡಿಕೆ ಲಿಂ. ಸಿದ್ಧಲಿಂಗಪ್ಪನವರ ಕುಟುಂಬದವರ ಸೇವೆ. (ಗಾಯತ್ರಿ ಮೆಡಿಕಲ್ಸ್, ಕ್ಯಾತ್ಸಂದ್ರ.) |
| ಶೇಷವಾಹನ | ರಾತ್ರಿ 8.30 | ಕಾಟೇನಹಳ್ಳಿ ಶ್ರೀ ಸಿದ್ದನಂಜಪ್ಪನವರ ಕುಟುಂಬದವರ ಸೇವೆ |

### ಮಾಘ ಬಹುಳ ತ್ರಯೋದಶಿ ಮಂಗಳವಾರ 20-2-2001

| | | |
|---|---|---|
| ಬಿಲ್ವವೃಕ್ಷವಾಹನ | ಸಂಜೆ 7.00 | ಕ್ಯಾತ್ಸಂದ್ರದ ಶ್ರೀ ಎಂ. ನಟರಾಜಯ್ಯನವರ ಸೇವೆ. |

### ಮಾಘ ಬಹುಳ ತ್ರಯೋದಶಿ ಬುಧವಾರ 21-2-2001

| | | |
|---|---|---|
| ಮಹಾಶಿವರಾತ್ರಿ ಪೂಜಾದಿಗಳು | | ಲಿಂ. ಓ.ಎನ್. ಲಿಂಗಣಯ್ಯನವರ ಕುಟುಂಬದವರ ಸೇವೆ. |
| ಮುತ್ತಿನಪಾಲಕಿ ಉತ್ಸವ | ರಾತ್ರಿ 9.30 | ಕೆಂಕೆರೆಪಾಳ್ಯದ ಲಿಂ.ಕೆ. ಬಸವಯ್ಯನವರ ಕುಟುಂಬದವರ ಸೇವೆ. ಮತ್ತು ಬಾಲ್ಯಕೆರೆ ಬಿ.ಕೆ. ಹೊನ್ನಬಸವಯ್ಯನವರ ಸಹೋದರರ ಸೇವೆ. ಶ್ರೀ ಎನ್. ರಾಜಶೇಖರಯ್ಯ, ಅಕ್ಕಿ ವ್ಯಾಪಾರಿಗಳು, ಬೆಂಗಳೂರು ಇವರ ಸೇವೆ. |

### ಮಾಘ ಬಹುಳ ಚತುರ್ದಶಿ ಗುರುವಾರ 22-2-2001

| | | |
|---|---|---|
| ರಥೋತ್ಸವ | ಬೆಳಿಗ್ಗೆ 11.00 | ಬೆಂಗಳೂರಿನ ಕಂಟ್ರಾಕ್ಟರ್ ಲಿಂ. ಶಿವರುದ್ರಪ್ಪನವರ ಕುಟುಂಬದವರ ಸೇವೆ |
| ರುದ್ರಾಕ್ಷಿ ಮಂಟಪೋತ್ಸವ | ರಾತ್ರಿ 8.30 | ದೇವರಾಯಪಟ್ಟಣದ ಲಿಂ.ಡಿ. ರುದ್ರಯ್ಯನವರ ಕುಟುಂಬದವರ ಸೇವೆ. |

### ಮಾಘ ಬಹುಳ ಅಮವಾಸ್ಯೆ ಶುಕ್ರವಾರ 23-2-2001

| | | |
|---|---|---|
| ನೂತನವಾಗಿ ನಿರ್ಮಿಸಿರುವ **ಬೆಳ್ಳಿಪಾಲಕಿ ಉತ್ಸವ** | ರಾತ್ರಿ 11.00 | ತುಮಕೂರಿನ ಲಿಂ. ಟಿ.ಎನ್. ಕೆಂಪಹೊನ್ನಯ್ಯನವರ ಕುಟುಂಬದವರ ಸೇವೆ. |

### ಫಾಲ್ಗುಣ ಶುದ್ಧ ಪಾಡ್ಯ ಶನಿವಾರ 24-2-2001

| | | |
|---|---|---|
| ಶಿವಾನುಭವ ಸಮ್ಮೇಳನ | ಸಂಜೆ 4.00 | |
| ತಪ್ಪೋತ್ಸವ | ರಾತ್ರಿ 8.30 | ಕ್ಯಾತ್ಸಂದ್ರ ಲಿಂ. ಕೆ.ಸಿ. ವೀರಶೆಟ್ಟಪ್ಪನವರ ಕುಟುಂಬದವರ ಸೇವೆ |
| ಪಂಚಬ್ರಹ್ಮೋತ್ಸವ | ರಾತ್ರಿ 10.00 | ಹಿಂದೂಪುರ ಕೋಳಾಲ ಲಿಂ. ಗುರುನಂಜಪ್ಪನವರ ಮಕ್ಕಳ ಸೇವೆ. |

ಮಾಮೂಲಿನಂತೆ 'ದನಗಳ ಜಾತ್ರೆ - ಎತ್ತುಗಳ ಪ್ರದರ್ಶನ' ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆಯೂ ನಡೆಯುವಂತೆ **'ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ'**ದಲ್ಲಿ ಪ್ರತಿದಿನವೂ ಸಾಯಂಕಾಲ ಸಾಂಸ್ಕೃತಿಕ ಚಟುವಟಿಕೆಗಳೂ ನಡೆಯುವಂತೆ ಏರ್ಪಡಿಸಿದೆ. ಏರ್ಪಾಡು ಮಾಡಲಾಗಿದೆ.
**ಸರ್ವರೂ ಸಕಾಲದಲ್ಲಿ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.**

ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ.

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು








# ಅಸ್ಪೃಶತೆ

—ಗೊ.ರು. ಚನ್ನಬಸಪ್ಪ,
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು - ೮೨

ನನ್ನ ಆತ್ಮೀಯರೊಬ್ಬರು ಕೆಲವು ವರ್ಷಗಳ ಹಿಂದೆ ತಾವು ಕಟ್ಟಿಸಿದ ಹೊಸ ಮನೆಗೆ ಒಂದು ಹೆಸರು ಸೂಚಿಸಬೇಕೆಂದು ನನ್ನನ್ನು ಕೇಳಿದರು. ನಾನು ಸೂಚಿಸಿದ ನಾಲ್ಕಾರು ಹೆಸರುಗಳಲ್ಲಿ ಒಂದು ಅವರಿಗೆ ಒಪ್ಪಿಗೆಯಾಯಿತು. ನಂತರ ಅವರು, ''ನಮ್ಮ ಮನೆಯ ಮುಂದೆ ಇನ್ನೊಂದು ಫಲಕ ಹಾಕಬೇಕೆಂದಿದ್ದೇನೆ, ನಿಮ್ಮ ಅಭಿಪ್ರಾಯಬೇಕು'' ಎಂದರು. ಸಹಜ ಕುತೂಹಲದಿಂದ ''ಯಾವ ಫಲಕ'' ಎಂದು ನಾನು ಕೇಳಿದೆ. ಅದಕ್ಕೆ ಅವರು ''ಸ್ಪೃಶ್ಯರಿಗೆ ಪ್ರವೇಶಾವಕಾಶವಿಲ್ಲ'' ಎಂಬ ಫಲಕ ಎಂದರು. ಇಂತಹ ಫಲಕವನ್ನು ಎಲ್ಲೂ ಯಾರೂ ಹಾಕಿದಂತೆ ಕಾಣಲಿಲ್ಲ. ಆದರೂ 'ಆಗಬಹುದು' ಎಂದು ನಾನು ನಗುತ್ತ ಹೇಳಿದೆ.

ಈ ಪ್ರಸಂಗದ ಅರ್ಥವನ್ನು ಬೇರೆ ಹೇಳಬೇಕಾಗಿಲ್ಲವೆಂದು ಕಾಣುತ್ತದೆ. ಮನೆ ಕಟ್ಟಿದವರು ಯಾರು? ಅವರ ಇನ್ನೊಂದು ಫಲಕದ ಮಾತಿನ ಅರ್ಥವೇನು? ಎಂಬುದನ್ನು ತಿಳಿಯಲು ಸಂಶೋಧನೆಯಾಗಲೀ, ವಿಶೇಷ ಅಧ್ಯಯನವಾಗಲೀ, ನಿಘಂಟಿನ ನೆರವಾಗಲೀ ಅಗತ್ಯವೆಂದು ನನಗೆ ಅನಿಸುವುದಿಲ್ಲ. ನಮ್ಮ ಸಮಾಜ ವ್ಯವಸ್ಥೆಯ ಪ್ರಜ್ಞೆಯುಳ್ಳವರಿಗೆಲ್ಲ ಇದು ಅರ್ಥವಾಗುತ್ತದೆ. ನಮ್ಮಿಬ್ಬರ ಸಂಭಾಷಣೆಯಲ್ಲಿ ಸಹಸ್ರಾರು ವರ್ಷಗಳಿಂದ ಆಚರಣೆಯಲ್ಲಿರುವ ಅಸಹ್ಯ ಮತ್ತು ವಿವೇಕಹೀನ ಆಚರಣೆಯೊಂದರ ಅಣಕವನ್ನು ಸುಲಭವಾಗಿ ಗುರುತಿಸಬಹುದು.

ತುಂಬ 'ಅರ್ಥಪೂರ್ಣ'ವೆಂದು ಹಿಂದೂ ಶಾಸ್ತ್ರಗ್ರಂಥಗಳು ಹೇಳುತ್ತ ಬಂದಿರುವ 'ವರ್ಣಾಶ್ರಮ' ಧರ್ಮದ ವಿಕೃತ ವ್ಯವಸ್ಥೆಗೆ ನಾನು ಪ್ರಸ್ತಾಪಿಸಿದ ಪ್ರಸಂಗ ಒಂದು ಸಮರ್ಥ ವ್ಯಾಖ್ಯೆಯಾಗುತ್ತದೆಂದು ಭಾವಿಸಿದ್ದೇನೆ. ಸೂತ್ರಕಾರರು ವರ್ಣಾಶ್ರಮ ಪದ್ಧತಿಯ ಬಗೆಗೆ ಏನೇ ಹೇಳಿದರೂ, ಅದರಿಂದ ವೃತ್ತಿ-ವಾಡಿಕೆಗಳನ್ನು ಆಧರಿಸಿದ ಸಾವಿರಾರು ಜಾತಿ ಉಪಜಾತಿಗಳು ಹುಟ್ಟಿಕೊಂಡಿರುವುದಂತೂ ಸತ್ಯ. ಧಾರ್ಮಿಕ ಕಾರ್ಯಗಳನ್ನು ಮಾಡುವವರದು ಮೇಲು ಜಾತಿಯಾಗಿದೆ; ದೈಹಿಕ ಶ್ರಮದ ಕೆಲಸ ಮಾಡುವವರದು ಕೀಳುಜಾತಿಯೆನಿಸಿದೆ.

ಈ ದುರಂತದ ದಳ್ಳುರಿಯಲ್ಲಿ ಬೆಂದುಬಂದ ಕಾರಣಕ್ಕೇ ನನ್ನ ಸ್ನೇಹಿತ ತನ್ನ ಹೊಸ ಮನೆಯ ಮುಂದೆ ''ಸ್ಪೃಶ್ಯರಿಗೆ ಪ್ರವೇಶಾವಕಾಶವಿಲ್ಲ'' ಎನ್ನುವ ಫಲಕದ ಮಾತನ್ನಾಡಿದ್ದು. ಅವರ ಮಾತು ನಗೆ ಮೂಡಿಸಿದರೂ, ಅದರ ಹಿಂದಿರುವ ಗಂಭೀರ ಸತ್ಯವನ್ನು ನಾವು ಅರ್ಥಮಾಡಿಕೊಳ್ಳಬೇಕು.

ಸ್ಪೃಶ್ಯಾಸ್ಪೃಶ್ಯ ಭಾವನೆಗಳಿರುವುದೇ ಸಂಪ್ರದಾಯಕ್ಕೆ ಅಂಟಿಕೊಂಡಿರುವ ಅಂಧಶ್ರದ್ಧೆಯ ಜನರಲ್ಲಿ; ವೈಚಾರಿಕ ಪ್ರಜ್ಞೆಯಿಲ್ಲದ ಅವಿವೇಕಿಗಳಲ್ಲಿ. ಸೃಷ್ಟಿಯ ಅದ್ಭುತಗಳಾಗಿರುವ ಭೂಮಿ, ಆಕಾಶ, ವಾಯು, ಜಲ, ಅಗ್ನಿ–ಈ ಪಂಚಭೂತಗಳನ್ನು ಬಿಟ್ಟು ಯಾವ ಜೀವಿಯೂ ಇರಲು ಸಾಧ್ಯವಿಲ್ಲ. ಇವುಗಳೆಂದೂ ಮೇಲು-ಕೀಳು ದೃಷ್ಟಿಯಿಂದ ಯಾರನ್ನೂ ನೋಡಿಲ್ಲ. ಮರಗಿಡಗಳಿರಲಿ, ಮಾನವನಿರಲಿ, ಪಶುವಿರಲಿ, ಪಕ್ಷಿಯಿರಲಿ, ಕ್ರಿಮಿಯಿರಲಿ – ಎಲ್ಲ ಜೀವಿಗಳಿಗೂ ಒಂದೇ ಆಶ್ರಯ. ಆದರೆ ಇವುಗಳನ್ನು ಶಕ್ತಿಗಳೆಂದು ಪರಿಗಣಿಸಿ ಅವುಗಳನ್ನು ಕುರಿತು ಮಂತ್ರಗಳನ್ನು ಕಟ್ಟಿ ಹಾಡಿ, ಪೂಜೆಯ ಆಟ ಹೂಡಿ, ಆ ಪಂಚಭೂತಗಳ ಕಾರುಣ್ಯ ದೊರಕಿಸಲು ಮಧ್ಯಸ್ಥನೆಂಬಂತೆ ನಿಲ್ಲುವ 'ಪೂಜಾರಿ' ಧರ್ಮ ಮಾನವ ಮಾನವರ ಮಧ್ಯೆ ಸ್ಪೃಶ್ಯಾಸ್ಪೃಶ್ಯತೆಯ ವಿಷದ ಬೀಜ ಬಿತ್ತಿ ಬೇಲಿ ಬೆಳೆಸಿದೆ.

ಈ ಬೇಲಿಯನ್ನು ಕಿತ್ತೆಸೆಯುವ ಪ್ರಯತ್ನಗಳು ನಡೆದೇ ಇವೆ. ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಮೊದಲಾದವರು ಈ ದಿಸೆಯಲ್ಲಿ ನಡೆಸಿದ ಪ್ರಯತ್ನಗಳು ಸಾಮಾನ್ಯವಲ್ಲ. ಆದರೂ ಅವರೆಲ್ಲರ ಮೇಲೆ ಸೇಡು ತೀರಿಸಿಕೊಳ್ಳುತ್ತಿರುವಂತೆ ಆ ಅಸ್ಪೃಶ್ಯತೆಯ ವಿಷಬೀಜದ ಹೊಸ ಬೇರುಗಳು ಆಳಕ್ಕಿಳಿಯುತ್ತಲೇ ಇವೆ. ಇದು ನಿಜಕ್ಕೂ ಕಳವಳಕಾರಿ; ಮಾನವ ಸಮಾಜಕ್ಕೇ ಕಳಂಕಕಾರಿ.

ಶೃತಿ, ಮತ, ಶೀಲಾಚರಣೆ, ಸಂಪ್ರದಾಯ – ಇವುಗಳ ಹೆಸರಿನಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವುದು ಯಾವ ಧರ್ಮ? ಹನ್ನೆರಡನೆಯ ಶತಮಾನದಲ್ಲಿದ್ದ ಅಂಬಿಗರ ಚೌಡಯ್ಯನೆಂಬ ಶರಣ *''ನೇಮಸ್ತನೆಂಬವ ಕ್ರೂರಕರ್ಮಿ, ಶೀಲವಂತನೆಂಬುವ ಸಂದೇಹಧಾರಿ, ಭಾಷೆವಂತನೆಂಬವ ಬ್ರಹ್ಮೇತಿಕಾರ – ಇವರು ಮೂವರು ಕುಳಿರ್ದಲ್ಲಿ ಕುಳ್ಳಿರಲಾಗದು; ಇವರು ಹೋದ ಬಟ್ಟೆಯ ಹೋಗಲಾಗದು.''* ಎಂದಿರುವುದು ನಮಗೆ ದಾರಿದೀಪ ವಾಗಬೇಕು.

ಅಸ್ಪೃಶ್ಯತೆ ಮಾನವ-ಮಾನವರ ಮಧ್ಯೆ ಇರುವುದಿಲ್ಲ. ಮಾಡುವ ಕೆಲಸಕ್ಕೂ ಈ ಅನಿಷ್ಟಕ್ಕೂ ಸಂಬಂಧವೇ ಇಲ್ಲ. ಮಾಡುವ ಕೆಲಸದಲ್ಲಿ ಕೊಳಕೆಂಬುದೇ ಇಲ್ಲ. ವಾಸ್ತವವಾಗಿ, ಕೊಳಕಿನ ಸ್ಥಳದಲ್ಲಿ ಬೆಳಕು ಮೂಡಿಸುವುದೇ ಕೆಲಸದ ಆಶಯ. ಇದನ್ನೇ ಶರಣರು 'ಕಾಯಕ' ಎಂದರು. *''ಕಾಯಕವಿಡಿದು ಮನೆಗೆ ಬಂದವರನ್ನು ಕುಲವಾವುದೆಂದು ಕೇಳಿದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ''* ಎನ್ನುತ್ತಾರೆ ಬಸವಣ್ಣನವರು.

ಕುಲಶ್ರೇಷ್ಠತೆ ಬರುವುದು ಹುಟ್ಟಿನಿಂದಲ್ಲ. ವ್ಯಕ್ತಿ ಬದುಕುವ ರೀತಿ-ನೀತಿಗಳಿಂದ; ಅವನ ವ್ಯಕ್ತಿತ್ವದಿಂದ; ಮುಖ್ಯವಾಗಿ ದೈಹಿಕ ಶ್ರಮದ ದುಡಿಮೆಯಿಂದ. ಆದರೆ, ಇಂದಿನ ಸ್ಥಿತಿ ಏನಾಗಿದೆ, ಶ್ರಮಜೀವಿಯ ದುಡಿಮೆಯ ಫಲಬೇಕು; ಆದರೆ ಈ ಶ್ರಮಜೀವಿ ಹತ್ತಿರಕ್ಕೆ ಬರುವುದು ಬೇಡ. ಎಂತಹ ಕ್ರೂರ ವಿಪರ್ಯಾಸ?

ನಾನು ಇತ್ತೀಚೆಗೆ ಒಂದು ಕವಿಗೋಷ್ಠಿಗೆ ಹೋಗಿದ್ದೆ. ಅಲ್ಲಿ ಒಬ್ಬ ಕವಿ ಒಂದು ಗನಿಗವನ ಓದಿದರು. ಆ ಕವನದ ಸಾಲುಗಳು ಹೀಗಿದ್ದವು: *''ನಮಗೆ ವಾಲ್ಮೀಕಿ ರಾಮಾಯಣ ಬೇಕು. ಆದರೆ ವಾಲ್ಮೀಕಿ ಬೇಡ, ಏಕೆ ಬೇಡ, ಆತ ಬೇಡ!''* – ಎಷ್ಟು ಅರ್ಥಪೂರ್ಣ ಈ ಸಾಲುಗಳು!

ಅಸ್ಪೃಶ್ಯತೆಯ ಕಳಂಕ ಹಚ್ಚಿಕೊಂಡ ಸಮಾಜ ಇನ್ನೂ ಎಚ್ಚರಗೊಳ್ಳದಿದ್ದರೆ, ನಾವೀಗ 'ಸ್ಪೃಶ್ಯ' ಎಂದು ಭಾವಿಸುವುದೇ 'ಅಸ್ಪೃಶ್ಯ'ವಾಗಬೇಕಾಗುತ್ತದೆ.

❀

## ಮುಖಪುಟ

೧. ಜನವರಿ ೧೩ರಂದು ಶ್ರೀಮಠದಲ್ಲಿ ನಡೆದ ಪರಮ ಪೂಜ್ಯ ಶ್ರೀ ಶ್ರೀ ಅಟವೀ ಸ್ವಾಮಿಗಳವರ ೧೦೦ನೆಯ ಪುಣ್ಯಾರಾಧನೆ ಸಮಾರಂಭವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಮಹಾಮನೆ ಸಂಪಾದಕರಾದ ಶ್ರೀ ಎಂ.ಜಿ. ನಾಗರಾಜ್ ಅವರು ಜ್ಯೋತಿ ಬೆಳಗಿಸುತ್ತಿರುವುದು. ವೇದಿಕೆಯಲ್ಲಿ ಶ್ರೀ ಅಟವೀ ಸುಕ್ಷೇತ್ರದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಅಟವೀ ಶಿವಲಿಂಗ ಮಹಾಸ್ವಾಮಿಗಳವರು, ಶ್ರೀಮಠದ ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಡಾ. ಬಿ. ನಂಜುಂಡ ಸ್ವಾಮಿ ಅವರು ಉಪಸ್ಥಿತರಿದ್ದರು.

೨. ಜನವರಿ ೧೪ರಂದು ಶ್ರೀಮಠದಲ್ಲಿ ನಡೆದ ಪರಮಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ೬೦ನೆಯ ಪುಣ್ಯಾರಾಧನೆ ಸಮಾರಂಭದ ಸಾನ್ನಿಧ್ಯವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ಅನುಗ್ರಹ ಭಾಷಣ ಮಾಡುತ್ತಿರುವುದು. ವೇದಿಕೆಯಲ್ಲಿ ಶ್ರೀ ನಾಗನೂರು ರುದ್ರಾಕ್ಷಿ ಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧರಾಮ ಮಹಾಸ್ವಾಮಿಗಳವರು. ಕನ್ನಡ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ. ಡಿ.ವಿ. ಪರಶಿವಮೂರ್ತಿಯವರು ಶಾಸಕರಾದ ಡಾ. ಸಿದ್ಧಲಿಂಗಯ್ಯ ಅವರು ಮತ್ತು ಜೈನ್ ಇನ್‌ಸ್ಟಿಟ್ಯೂಟ್ ಆಫ್ ವೆಕೇಷನಲ್ ಸೆಂಟರ್‌ನ ನಿರ್ದೇಶಕರಾದ ಡಾ. ಡಿ.ಬಿ. ಪ್ರಕಾಶ್‌ರವರು ಉಪಸ್ಥಿತರಿದ್ದರು.

೩. ಶ್ರೀಮಠದಲ್ಲಿ ಜನವರಿ ೨೬ರಂದು ೫೨ನೆಯ ಗಣರಾಜ್ಯೋತ್ಸವ ಸಮಾರಂಭವು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ತುಮಕೂರು ವಿಧಾನಸಭಾ ಸದಸ್ಯರಾದ ಶ್ರೀ ಎಸ್. ಶಿವಣ್ಣ ಅವರು ಧ್ವಜಾರೋಹಣ ಮಾಡಿದರು. ಈ ಸಂದರ್ಭದಲ್ಲಿ ತುಮಕೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಕೆ. ಜನಾರ್ದನ ರಾವ್ ಮೊದಲಾದವರು ಹಾಜರಿದ್ದರು.





# ಅಮುಗಿದೇವಯ್ಯ

*– ಲಿಂ. ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ*

ಅಮುಗಿದೇವಯ್ಯ ೧೨ನೇ ಶತಮಾನದ ಶರಣ ಸಮುದಾಯದಲ್ಲಿ ಪ್ರಸಿದ್ಧನಾದವನು. ನೇಯ್ಗೆಯ ಕಾಯಕದಲ್ಲಿ ತೊಡಗಿದ್ದ ಈತನು ಅಖಂಡವಾದ ಕಾಯಕ ನಿಷ್ಠೆ ಮತ್ತು ಅಚಲವಾದ ಲಿಂಗನಿಷ್ಠೆಗಳಿಗೆ ಹೆಸರಾಗಿದ್ದಾನೆ. ಮೊದಲು ಈತ ಸಿದ್ಧರಾಮನ ಸೊಲ್ಲಾಪುರದಲ್ಲಿದ್ದು; ಅಲ್ಲಿಂದ ಕಲ್ಯಾಣಕ್ಕೆ ಬಂದು ಶರಣರ ಕಾರ್ಯಕ್ಷೇತ್ರದಲ್ಲಿ ಬೆರತಂತೆ ತೋರುತ್ತದೆ. ಕಲ್ಯಾಣದ ಕ್ರಾಂತಿಯ ನಂತರವೂ ತನ್ನ ಸಾಧನೆಯನ್ನು ಮುಂದವರಿಸಿ ರಾಜಮನ್ನಣೆಯನ್ನು ಪಡೆದೆನೆಂಬುದಕ್ಕೆ ಪುಳಜೆಯ ಶಾಸನ ಸಾಕ್ಷಿಯಾಗಿದೆ. ಈ ಪುಳಜೆಯ ಸಿದ್ಧಸೋಮನಾಥ ಈತನ ಇಷ್ಟದೈವ. ಅದೇ ಅಂಕಿತದಿಂದ ಈತ ವಚನಗಳನ್ನೂ ರಚಿಸಿದ್ದಾನೆ. ೧*

ಆಮುಗಿದೇವ ಎಂಬ ಹೆಸರಿನ ಇನ್ನೊಬ್ಬ ವಚನಕಾರ ಬಸವಣ್ಣನವರ ಕಾಲದಲ್ಲಿಯೇ ಆಗಿಹೋದುದು ಕಂಡುಬರುತ್ತದೆ. ಆತ ಕನ್ನಡಿ (ಕ್ಷೌರದ) ಕಾಯಕದವನು. 'ಕಮಳೇಶ್ವರ ಲಿಂಗ' ಎಂಬ ಅಂಕಿತದಿಂದ ವಚನಗಳ್ನು ಬರೆದಿದ್ದಾನೆ. ಈ ಇಬ್ಬರಲ್ಲದೆ 'ಅಮುಗೇಶ್ವರ ಲಿಂಗ' ಎಂಬ ಅಂಕಿತದಿಂದ ವಚನಗಳನ್ನು ಬರೆದಿರುವ ಇನ್ನೊಬ್ಬ ಅಮುಗಿದೇವ ಇದ್ದಿರಬೇಕೆಂದು ಕವಿಚರಿತೆಕಾರರು ಊಹಿಸಿ ಆತನ ಒಂದು ವಚನವನ್ನೂ ಉದಾಹರಿಸಿದ್ದರು. ಆದರೆ ಡಾ॥ ಫ.ಗು. ಹಳಕಟ್ಟಿಯವರು ಆ ವಚನ ನೇಯ್ಗೆಯ ಆಮುಗಿದೇವನ ಪತ್ನಿ ರಾಯಮ್ಮನದೆಂದು ತೋರಿಸಿಕೊಟ್ಟರು. ಆದುದರಿಂದ ಅಮುಗಿದೇವಯ್ಯಗಳು ಮೂವರಲ್ಲ; ಇಬ್ಬರೇ ಎಂದು ಹೇಳಬೇಕಾಗುತ್ತದೆ; ಕನ್ನಡಿ ಕಾಯಕದವನೊಬ್ಬ, ನೇಯ್ಗೆಯ ಕಾಯಕದವನು ಇನ್ನೊಬ್ಬ. ಇವರಲ್ಲಿ ಸಿದ್ಧರಾಮನೊಡನೆ ಸಂಬಂಧವನ್ನು ಪಡೆದು ಕೃತಿಗಳಲ್ಲಿ ಪ್ರಸಿದ್ಧನಾದವನು ನೇಯ್ಗೆಯ ಕಾಯಕದ ಆಮುಗಿದೇವನೆಂಬುದನ್ನು ಪ್ರಚಲಿತವಾಗಿರುವ ಕಥೆಗಳೆಲ್ಲವೂ ಏಕಕಂಠದಿಂದ ಹೇಳುತ್ತಿವೆ.

ಕನ್ನಡ ಸಾಹಿತ್ಯಕೃತಿಗಳಲ್ಲಿ ಇವನ ಕಥೆ ಕ್ರಮೇಣ ಬೆಳೆಯುತ್ತಾ ಬಂದಿರುವುದನ್ನು ಕಾಣಬಹುದು. ಸಿದ್ಧನಂಜೇಶನ 'ರಾಘವಾಂಕ ಚಾರಿತ್ರ' – ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ರಾಘವಾಂಕನ ಎಲ್ಲ ಕಾವ್ಯಗಳ ಕಥಾಸಾರವನ್ನೂ ಸಿದ್ಧನಂಜೇಶ ಪ್ರಾಸಂಗಿಕವಾಗಿ ಅಲ್ಲಿ ಸಂಗ್ರಹಿಸಿ ಕೊಟ್ಟಿದ್ದಾನೆ. ಅಂತೆಯೇ 'ಸಿದ್ಧರಾಮ ಚಾರಿತ್ರ'ದ ಕಥೆಯೂ ಅಲ್ಲಿದೆ. ಅಲ್ಲಿ ಬರುವ ಆ ಕಥೆಯನ್ನು ಸಂಗ್ರಹವಾಗಿ ಹೀಗೆ ಹೇಳಬಹುದು:

ಸಿದ್ಧರಾಮನು ಬಿಲ್ಲೇಶ ಬೊಮ್ಮಯ್ಯನ ನೆಪದಿಂದ ನರಕಿಗಳನ್ನು ಉದ್ಧರಿಸಿದ ನಂತರ, ಕ್ಷೇತ್ರಪೂಜೆ ಮತ್ತು ಮದುವೆಗಳ ಸಂಭ್ರಮವನ್ನು ಮಾಡಲುಜ್ಜುಗಿಸಿದನು. ಅದಕ್ಕಾಗಿ *''ತತ್ಪುರವ ಚೆನ್ನನಾಗಿಸಿ ಕೊಟ್ಟಣವನು ಹಾಯ್ಕೆನಲು''* ಅವನ ಶಿಷ್ಯರು ಅವರಿವರೆನ್ನದೆ ಎಲ್ಲರಿಗೂ ಕೊಟ್ಟಣವನ್ನು ಹಾಕತೊಡಗಿದರು. ಅಮುಗಿದೇವನ ಮನೆಗೂ ಕೊಟ್ಟಣ ಹಾಕಿದರು. ಆದರೆ ಅಮುಗಿದೇವಯ್ಯ ಅದಕ್ಕೆ ಒಪ್ಪದೆ ಕೊಟ್ಟಣವನ್ನು ಚೆಲ್ಲಿದನು. ಶಿಷ್ಯರು ಇದನ್ನು ಸಿದ್ಧರಾಮನಿಗೆ ತಿಳಿಸಿದರು. ಸಿದ್ಧರಾಮನು ಅಮುಗಿದೇವನನ್ನು ಕರೆಸಿ ಕೇಳಿದರೆ ಅದಕ್ಕೆ :

*''ವರ ವೀರಶೈವರಿಗೆ ಸಲ್ಲದೀಕಜ್ಜ''* ಎಂದು ಅಮುಗಿದೇವಯ್ಯ.

*''ಕಪಿಲಸಿದ್ಧೇಶ್ವರ ಸೇವೆ ತಾಂ ಸಲ್ಲದೇ?''* ಸಿದ್ಧರಾಮನ ಪ್ರಶ್ನೆ.

*''ಕಪಿಲಸಿದ್ಧಮಲ್ಲೇಶ ತಾಂ ಪಿರಿದು ನಿಮಗೈಸೆ ನಮಗೇನು?''* ಎಂದು ಅಮುಗಿ ದೇವಯ್ಯನ ಉತ್ತರ.

*''ಇಂತಪ್ಪ ದೊರೆಗಳು ಎಮ್ಮೂರೊಳಗೆ ಇರಸಲ್ಲ''* – ಎಂದು ಸಿದ್ಧರಾಮ ಆಜ್ಞಾಪಿಸಿದ.

*''ನಿಮ್ಮ ಪುರವೆಮಗೆ ಸಲ್ಲದು''* ಎಂದು ಆ ಊರನ್ನೇ ಬಿಟ್ಟು ಹೊರಡಲು ನಿಶ್ಚಯಿಸಿದ ಅಮುಗಿದೇವಯ್ಯ ತನ್ನ ಸಾಮಾನುಗಳನ್ನೆಲ್ಲಾ ಮೂರು ಹೊರೆಗಳನ್ನಾಗಿ ಮಾಡಿ ತಾನೊಂದನ್ನು ಹೊತ್ತು ತನ್ನ ಪತ್ನಿಗೊಂದನ್ನು ಹೊರಿಸಿದ. *''ಕಪಿಲಸಿದ್ಧಮಲ್ಲಯ್ಯ, ಮುಂದಣೂರಿಗೆ ನೀನೊಂದು ಹೊರೆಯಂ ತರ್ಪುದು''* – ಎಂದು ಶಿವನಿಗೆ ಹೇಳಿ ಮುಂದೆ ನಡೆದ. ಭಕ್ತನ ಮಾತು ಶಿವನಿಗೆ ಶಿರೋಧಾರ್ಯವಾಯಿತು. ಹೊರೆಯನ್ನು ಹೊತ್ತು ನಡೆದ ಕಪಿಲಸಿದ್ಧ ಮಲ್ಲಿಕಾರ್ಜುನ. ಮರುದಿನ ಸಿದ್ಧರಾಮ ಲಿಂಗಕ್ಕೆ ಅಭಿಷೇಕ ಮಾಡುವಾಗ ''ಹೋ ಹೋ ತಲೆಬುಗುಟು ನೋಯುತಿದೆ ಮುಟ್ಟದಿರು ಸಿದ್ಧರಾಮ'' ಎನ್ನುತ್ತಾನೆ ಶಿವ. ಅದಕ್ಕೆ ಸಿದ್ಧರಾಮ :

''ದೇವ, ನಿಮ್ಮ ಶಿರ ನೊಂದ ಪರಿಯೆಂತುಟು?'' ಎಂದು ಹೇಳಿದ.

''ಬಿಟ್ಟಿಯಾ ಹೊರೆ ಹೊತ್ತು ಶಿವಭಕ್ತರ್ಗೆ'' ಶಿವ ಉತ್ತರಿಸಿದ.

*"ನಿಮ್ಮ ಕೈಯ್ಯಿಂ ಬಿಟ್ಟಿಯಂ ಮಾಡಿಸಿದ ಭಕ್ತಪುಂಗವಾನಾರು?"* ಮತ್ತೆ ಪ್ರಶ್ನೆ ಸಿದ್ಧರಾಮನದು.

''ಎನ್ನ ಭಕ್ತಿಯ ಕಣಿಯು, ಎನ್ನ ಚಿಂತಾಮಣಿಯು ಎನ್ನ ಭಾಗ್ಯದ ನಿಧಿಯು, ಎನ್ನ ತೃಪ್ತಿಯ ಸುಧೆಯು, ಎನ್ನಯ್ಯನಮುಗಿದೇವಯ್ಯ'' ಎಂದು ಹೇಳಿದ ಶಿವ. ಆಗ ಸಿದ್ಧರಾಮ ಬೆಚ್ಚಿ ಪಶ್ಚಾತ್ತಾಪದಿಂದ ಬಾಯ್ಬಿಡುತ್ತಾ ಅಮುಗಿದೇವಯ್ಯನ ಬಳಿಗೆ ಬರುತ್ತಾನೆ. *"ಅಪರಾಧಿ ನಾನು; ಸಲಹಯ್ಯ ಅಮುಗಿದೇವಯ್ಯ"* ಎಂದು ಅನೇಕ ಬಗೆಯಲ್ಲಿ ಸ್ತುತಿಸಿ, ತನ್ನ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿ ಮತ್ತೆ ಅವನು ಸೊನ್ನಲಿಗೆಗೆ ಬರುವಂತೆ ಒಪ್ಪಿಸುತ್ತಾನೆ. ಈ ಮೊದಲು ಶಿವ ಹೊತ್ತು ತಂದ ಹೊರೆಯನ್ನು ಸಿದ್ಧರಾಮ ತಾನೇ ಹೊತ್ತು ಅವನನ್ನು ಹಿಂದಕ್ಕೆ ಕರೆತರುತ್ತಾನೆ. ಅವನ ಸಮ್ಮುಖದಲ್ಲಿ ಗಣಾರಾಧನೆ ವಿವಾಹಗಳು ನಡೆಯುತ್ತವೆ.★೨.

ಈ ಕಥೆಯನ್ನು ರಾಘವಾಂಕನ 'ಸಿದ್ಧರಾಮ ಚಾರಿತ್ರ'ದಿಂದ ಸಂಗ್ರಹಿಸಿ ಕೊಟ್ಟಿರುವುದಾಗಿ ಸಿದ್ಧನಂಜೇಶನ ಹೇಳಿಕೆ. ರಾಘವಾಂಕನ ಇತರ ಕೃತಿಗಳನ್ನೂ ಮತ್ತು ಕೃತಿಯ ಇತರ ಸನ್ನಿವೇಶಗಳನ್ನೂ ಆತ ಸಂಗ್ರಹಿಸಿರುವುದನ್ನು ನೋಡಿದರೆ ಕವಿಯ ಮಾತುಗಳನ್ನೇ ಹಿಡಿದು ಅದೇ ಮಾರ್ಗದಲ್ಲಿ ನಡೆದಿರುವುದು ಕಾಣುತ್ತದೆ. ಇನ್ನೂ ಗಮನಾರ್ಹವಾದ ಅಂಶವೆಂದರೆ ರಾಘವಾಂಕನಿಗೆ ವಿಶಿಷ್ಟವಾದ ಸಂಭಾಷಣಾ ಶೈಲಿ ಈ ಕಥನ ನಿರೂಪಣೆಯಲ್ಲಿ ಕಂಡುಬರುವುದು. ಆದರೆ ಈಗ ದೊರೆತು ಪ್ರಕಟವಾಗಿರುವ 'ಸಿದ್ಧರಾಮ ಚಾರಿತ್ರ'ದಲ್ಲಿ ಈ ಕಥೆ ಇಲ್ಲ. ಅಮುಗಿದೇವನ ಹೆಸರೇ ಅಲ್ಲಿ ಬರುವುದಿಲ್ಲ. ಇದು ಕುತೂಹಲಕರವಾದ ಅಂಶ.

ಸಿದ್ಧನಂಜೇಶನ ಕಾಲ ಸುಮಾರು ೧೬೫೦, ಅಂದರೆ ೧೭ನೇ ಶತಮಾನದ ಮಧ್ಯಭಾಗ. ಇವನಿಗಿಂತ ಹಿಂದೆ ಆಗಲೇ ಅಮುಗಿದೇವನ ಕಥೆ ಸಾಕಷ್ಟು ಪ್ರಚಲಿತವಾಗಿ ಬೆಳೆದು ಬಂದಿತ್ತು. ಸುಮಾರು ೧೪೬೫ರಲ್ಲಿದ್ದಿರಬಹುದಾದ★೩. ಹಲಗೆದೇವರು ಸಂಕಲಿಸಿದ **'ಶೂನ್ಯ ಸಂಪಾದನೆ'**ಯಲ್ಲಿ ಅಮುಗಿದೇವನ ಕಥೆ ಬರುತ್ತದೆ. ಪ್ರಭುದೇವರು ಒಬ್ಬೊಬ್ಬರ ಶರಣರ ಬಳಿಗೆ ಬಂದಾಗಲೂ ಅವರ ಪೂರ್ವಸಂಗತಿಯನ್ನು ತಮ್ಮ ಮಾತುಗಳಲ್ಲಿ ಹೇಳಿ ಅನಂತರ ಆ ಶರಣರ ಸಂಭಾಷಣೆಯ ವಚನಗಳನ್ನು ಸಂಕಲ್ಪಿಸುವುದು ಹಲಗೆಯದೇವರ ಪದ್ಧತಿ. ಅಂತೆಯೇ ಪ್ರಭುದೇವ ಸಿದ್ಧರಾಮನ ಬಳಿಗೆ ಬಂದಾಗ ಸಿದ್ಧರಾಮನ ಪೂರ್ವಸಂಗತಿಯನ್ನೂ ಆತನ ಕಾರ್ಯಕ್ಷೇತ್ರದ ವರ್ಣನೆಯನ್ನೂ ಕೊಡುತ್ತಾನೆ. ಆ ಸನ್ನಿವೇಶದಲ್ಲಿ ಅಮುಗಿ ದೇವಯ್ಯನ ಕಥೆಯನ್ನು ಹೇಳಲಾಗಿದೆ.

ಇಲ್ಲಿಯೂ ಲಿಂಗನಿಷ್ಠಾಪರನಾದ ಅಮುಗಿದೇವಯ್ಯ, ಭವಿಸೇವೆಯನ್ನು ಮಾಡೆನೆಂದು ತನಗೆ ಹಾಕಿದ ಕೊಟ್ಟಣವನ್ನು ಕುಟ್ಟದೆ ಆ ಧಾನ್ಯವನ್ನು ತಿಪ್ಪೆಗೆ ಚೆಲ್ಲಿಸುತ್ತಾನೆ. ಆಗ ಸಿದ್ಧರಾಮ ಕೋಪದಿಂದ ಭುಗಿಲಿಡುತ್ತಾ ಅಮುಗಿದೇವನ ಮೇಲೆ ತನ್ನ ನೊಸಲಕಣ್ಣಿನ ಬೆಂಕಿಯ ಪ್ರವಾಹವನ್ನು ಹರಿಯಬಿಡುತ್ತಾನೆ. ಆದರೆ ಅಮುಗಿದೇವಯ್ಯ ಅದನ್ನು ಲೆಕ್ಕಿಸದೆ ತನ್ನ **''ಉಸಿರುಗೂಡಿದ ಕುಂಚಿಕೆಯ ಹನಿಯ ತುಷಾರದಿಂದ''** ಆರಿಸುತ್ತಾನೆ. ಸಿದ್ಧನಿಗೆ ಅದು ಕಂಡು ನಾಚಿಕೆಯಾದರೂ ಪಶ್ಚಾತ್ತಾಪವಾಗಲಿಲ್ಲ. ನಮ್ಮೂರಲ್ಲಿರಬೇಡವೆಂದು ಅವನನ್ನು ಹೊರಡಿಸಿದ. ಅಮುಗಿದೇವನ ಹೊರೆಯನ್ನು ಹೊತ್ತುಕೊಂಡೊಯ್ದು ಶಿವನ ಮಸ್ತಕದ ನೋವನ್ನು ತಿಳಿದ ಮೇಲೆ ಮತ್ತೆ **''ಆತನೆಂದರೆ ಕೇಳಿದಲ್ಲದೆ ನಮ್ಮ ಕೃಪೆಗೆ ನೀನು ಪಾತ್ರನಲ್ಲ''** – ಎಂದು ಶಿವನೇ ಸ್ಪಷ್ಟವಾಗಿ ಹೇಳಿದ ಮೇಲೆ ಸಿದ್ಧನಿಗೆ ಜ್ಞಾನೋದಯವಾಯಿತು. ಅಮುಗಿದೇವಯ್ಯನಿದ್ದ ಊರಿಗೆ ಓಡಿ ಬಂದು ಶರಣಾಗತನಾದನು. ಆಗ ಅಮುಗಿದೇವನು ಸಿದ್ಧರಾಮನನ್ನು ಸಮಾಧಾನಪಡಿಸಿ, ಅಲ್ಲಮಪ್ರಭು ಸೊನ್ನಲಿಗೆಗೆ ಬರುವ ಸೂಚನೆಯನ್ನು ಕೊಟ್ಟನು; ಪ್ರಭುವನ್ನು ಅನುಸರಿಸಿ ಕಲ್ಯಾಣಕ್ಕೆ ಹೋಗಿ ಲಿಂಗಸಂಬಂಧಿಯಾಗೆಂದು ಹೇಳಿ ಕಳಿಸಿದನು.

ಇನ್ನು 'ಅಮುಗಿದೇವಯ್ಯಗಳ ರಗಳೆ' ಎಂಬುದು ಈತನನ್ನೇ ಕುರಿತು ರಚಿತವಾದ ಸ್ವತಂತ್ರಕೃತಿ. ಈ ರಗಳೆಯ ಪ್ರಾರಂಭದಲ್ಲಿ **''ಶಂಕರ ಲಿಂಗಾ''** ಎಂಬ ಅಂಕಿತದ ಕಂದ ಪದ್ಯವಿರುವುದರಿಂದ ಇದು ಶಂಕರದೇವ ವಿರಚಿತವಾದ ರಗಳೆ ಎನ್ನಬಹುದಾಗಿದೆ. ಈ ಶಂಕರದೇವ ೧೬೨೦ರಲ್ಲಿ ಇದ್ದಿರಬಹುದುದೆಂದು ಕವಿಚರಿತ್ರೆಕಾರರು ಅಭಿಪ್ರಾಯಪಟ್ಟಿದ್ದರು. ಆದರೆ ಶ್ರೀ ಸಿ. ಮಹಾದೇವಪ್ಪನವರು ಇವನ ಕಾಲ ೧೫೩೦ಕ್ಕಿಂತ ಹಿಂದೆ ಎಂಬುದನ್ನು ಸಾಧಾರಣವಾಗಿ ತೋರಿಸಿಕೊಟ್ಟಿದ್ದಾರೆ.★೪. ಅಂದರೆ ೧೬ನೇ ಶತಮಾನದ ಆಧಿಭಾಗವೆಂದಿಟ್ಟುಕೊಳ್ಳಬಹುದು.

ಅಮುಗಿದೇವನ ಮೇಲೆ ರಚಿತವಾದ ಮೊಟ್ಟ ಮೊದಲನೆಯ ಸ್ವತಂತ್ರಕೃತಿಯಾದ ಈ ರಗಳೆ ಅದುವರೆಗೆ ಬೆಳೆದು ಬಂದ ಧಾಟಿಯಲ್ಲಿಯೇ ಆತನ ಕಥೆಯನ್ನು ಚಿತ್ರಿಸಿದೆ. ಕೊಟ್ಟಣ ಕುಟ್ಟಲು ನಿರಾಕರಿಸಿದ ಈತನನ್ನು ಸಿದ್ಧರಾಮ ಊರು ಬಿಡಿಸುವುದು, ಶಿವ ಹೊರೆಹೊತ್ತು ನೊಂದುದನ್ನು ತಿಳಿದ ಸಿದ್ಧ ಪಶ್ಚಾತ್ತಾಪದಿಂದ ಆತನ ಬಳಿಗೆ ಓಡಿಬರುವುದು – ಹೀಗೆ ಕಥೆ ಬೆಳೆಯುತ್ತದೆ. ಸಿದ್ಧರಾಮ ಪಶ್ಚಾತ್ತಾಪದಿಂದ ಅಮುಗಿದೇವಯ್ಯನಿರುವ ಊರಿಗೆ ಬಂದಾಗ ಅಮುಗಿದೇವ, ಲಿಂಗವಿರಹಿತನಾದ ಆತನ ಮುಖಾವಲೋಕನಕ್ಕೂ ಒಪ್ಪಲಿಲ್ಲ. ಸಿದ್ಧರಾಮ ಹಾಗೆಯೇ ಸೊನ್ನಲಿಗೆಗೆ ಹಿಂದಿರುಗಿ ಬಂದು ಮಲ್ಲಿಕಾರ್ಜುನನ ಎದುರು ತನಗೆ ಇಷ್ಟಲಿಂಗೋಪದೇಶವಿಲ್ಲದ ದುಃಖವನ್ನು ತೋಡಿಕೊಂಡನು. ಆಗ ಶಿವ **''ಜಂಗಮಾಕೃತಿಯಾಗಿ ನಾ ಕರುಣದಿಂ ಬಂದು ನಿನಗೆ ಸನ್ನಿಧಿಯಾಗಿ ಇಷ್ಟಲಿಂಗವ ಕೊಡುವೆ''**





ಎಂದು ಸಂತೈಸಿದನು. ಮತ್ತು ಅಂತೆಯೇ ಬಂದು ಇಷ್ಟಲಿಂಗದೀಕ್ಷೆಯನ್ನು ದಯೆಗೈದನು. ಅದನ್ನು ತಿಳಿದ ಅಮುಗಿದೇವಯ್ಯನೂ ಸಂತೋಷಗೊಂಡು, ಬಳಿಗೆ ಬಂದ ಅವನನ್ನು ತಬ್ಬಿಕೊಂಡನು. ಶಿವನೂ ಸತಿಸಹಿತ ಗಣಗಳೊಡನೆ ಬಂದು ತನ್ನ ಕುಲದೀಪಕನನ್ನು ಪಾರ್ವತಿಗೆ ತೋರುತ್ತಾ ಹಿಗ್ಗಿದ್ದನು – ಇದು ಶಂಕರಲಿಂಗ ಕೊನೆಯಲ್ಲಿ ಮಾಡಿಕೊಂಡ ಬದಲಾವಣೆ.

ಅಮುಗಿದೇವಯ್ಯನನ್ನು ಕುರಿತ ಈ ಕಥೆಗಳನ್ನು ನೋಡಿದರೆ ಒಂದಂಶ ಸ್ಪಷ್ಟವಾಗುತ್ತದೆ. ಇಷ್ಟಲಿಂಗನಿಷ್ಠೆಯ ಏಕೈಕ ಸಂಕೇತವಾಗಿ ಅಮುಗಿದೇವ ಕಂಗೊಳಿಸುತ್ತಾನೆ. ಬಹಿರಂಗ ಪೂಜಾತತ್ಪರನಾದ ಸಿದ್ಧರಾಮನನ್ನು ಎಚ್ಚರಗೊಳಿಸಿ ಅಂತರ್ಮುಖನನ್ನಾಗಿ ಮಾಡಿದುದು ಈ ಕಥೆಯಿಂದ ಧ್ವನಿತವಾಗುವ ತತ್ತ್ವ. ಸಾಕ್ಷಾತ್ ಶಿವನೇ ಹೊರೆಯನ್ನು ಹೊತ್ತನೆಂಬುದು ಅರ್ಥಗರ್ಭಿತವಾದ ಒಂದು ಪ್ರತೀಕ. ತಮ್ಮ ತಮ್ಮ ಕಾಯಕದಲ್ಲಿ ಮಗ್ನರಾಗಿ ಅಂತರಂಗದ ಪೂಜೆಯನ್ನು ಕೈಗೊಳ್ಳುವ ನಿಸ್ಪೃಹ ಸಂಸಾರಿಗಳ ಸಾಧನೆಯ ಶಕ್ತಿ, ಜನ ಮೆಚ್ಚುಗೆಯ ಆಡಂಬರದಲ್ಲಿ ಮೈಮರೆತ ಮಹಾಸಾಧಕನ ಯೌಗಿಕಶಕ್ತಿಗಿಂತಲೂ ಮಿಗಿಲಾದುದೆಂಬುದನ್ನು ಅಮುಗಿ ದೇವಯ್ಯನ ಕಥೆ ಸಾರಿಹೇಳುತ್ತಿದೆ. ಹಲಗೆಯ ದೇವರು, ಶಂಕಲಿಂಗ, ಸಿದ್ಧನಂಜೇಶ ಇವರು ಹೇಳಿದ ಕಥೆಯ ವಿವರಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿರಬಹುದು. ಆದರೆ ಒಟ್ಟಿನ ಪರಿಣಾಮ ಏಕಮುಖ ವಾಗಿ ಬೆಳೆದುಕೊಂಡು ಬರುವುದಕ್ಕೆ ಈ ಕಥೆಗಳು ಸಹಾಯಕವಾಗಿವೆ.

ಇದನ್ನೇ ಮುಂದುವರಿಸದೆ ಅಮುಗಿದೇವನನ್ನು ಕುರಿತು ಇನ್ನೊಂದು ಸ್ವತಂತ್ರ ಕೃತಿ, ''ಅಮುಗಿದೇವಯ್ಯಗಳ ಸಾಂಗತ್ಯ''. ಶಿವಲಿಂಗಕವಿ ಈ ಕಾವ್ಯದ ಕರ್ತೃ. ಈತನ ಕಾಲ ಸುಮಾರು ೧೭ನೇ ಶತಮಾನ★೫. ಇದುವರೆಗೂ ನೋಡಿದ ಅಮುಗಿದೇವನ ಕಥೆಯನ್ನು ಒಂದು ಸ್ವತಂತ್ರಕಾವ್ಯಕ್ಕೆ ಅನುಗುಣವಾಗುವಂತೆ ಹಿಗ್ಗಲಿಸಿಕೊಂಡಿದ್ದಾನೆ. ಸಿದ್ಧರಾಮನನ್ನು ರಾಜನನ್ನಾಗಿ ವರ್ಣಿಸಿರುವ ರೀತಿ, ಚಪ್ಪನ್ನಾರು ದೇಶದ ರಾಜರೊಡನೆ ಆತ ಕಾದುವ ಬಗೆ ನವೀನವಾಗಿದೆ. ಸಿದ್ಧರಾಮನನ್ನು ರಾಜನನ್ನಾಗಿ ಮಾಡಿದುದರಿಂದ ಕವಿಗೆ, ಕೆಲವು ಸನ್ನಿವೇಶಗಳನ್ನು ಕಲ್ಪಿಸಿ ತನ್ನ ವರ್ಣನಾಚತುರತೆಯನ್ನು ವ್ಯಕ್ತಪಡಿಸಲು ಅವಕಾಶ ಸಿಕ್ಕಿದೆ. ಆಸ್ಥಾನ, ಯುದ್ಧ, ಕೊನೆಗೆ ವೇಶ್ಯಾವಾಟಿಕೆಯ ವರ್ಣನೆಯನ್ನೂ ವ್ಯಕ್ತಪಡಿಸಲು ತಂದುಬಿಟ್ಟಿದ್ದಾನೆ ಶಿವಲಿಂಗ. ಇಷ್ಟಾದರೂ ಸಿದ್ಧರಾಮನ ಘನತೆಗೆ ಕುಂದುಂಟಾಗದಂತೆ ಎಚ್ಚರಿಕೆ ವಹಿಸಿದ್ದಾನೆ. ಆತನು ಹೊರಗಡೆ ರಾಜನಾಗಿದ್ದಂತೆ, ಅಂತರಂಗದಲ್ಲಿ ಏಕಾಂತವಾಸದ ತಪಸ್ವಿಯೂ, ದಿನಕ್ಕೆ ಮೂರುವೇಳೆ ಕೈಲಾಸಕೈದಿ ಈಶ್ವರನನ್ನು ಸಂದರ್ಶಿಸಿ ಬರುವ ಆತ್ಮಜ್ಞಾನಿಯೂ ಆಗಿದ್ದನೆಂಬುದನ್ನು ಚಿತ್ರಿಸಿದ್ದಾನೆ.

ಅಮುಗಿದೇವನ ಕಥೆ ಪ್ರಾರಂಭವಾಗುವುದು ನಾಲ್ಕನೆಯ ಸಂಧಿಯಿಂದ. ಕೆಲವು ವಿವರಗಳಲ್ಲಿ ಹಿಂದಿನ ಕಥೆಗಿಂತ ಭಿನ್ನವಾಗಿದೆ ಶಿವಲಿಂಗನ ನಿರೂಪಣೆ. ಅಮುಗಿ ದೇವಯ್ಯನ ಪತ್ನಿಯ ಹೆಸರನ್ನು ಈತ 'ರುದ್ರಾಣಿ' ಎಂದು ಹೇಳುತ್ತಾನೆ. ಶಂಕರದೇವ ಕೊಟ್ಟಿರುವ ಹೆಸರು ವರದಾನಿ ಎಂದು. ಶ್ರೀ ಫ.ಗು. ಹಳಕಟ್ಟಿಯವರು ''ಅಮುಗಿದೇವನಿಗೆ ರಾಯಮ್ಮ'' ಎಂಬ ಹೆಂಡತಿಯು ಇದ್ದು ಆಕೆಯಾದರೂ ವಚನಗಳನ್ನು ರಚಿಸಿದಂತೆ ವಚನಸಂಗ್ರಹಗಳಿಂದ ಗೊತ್ತಾಗುತ್ತದೆ ಎನ್ನುತ್ತಾರೆ★೬. ಮತ್ತು ಆಕೆಯ ನಾಲ್ಕು ವಚನಗಳನ್ನು ಉದಾಹರಿಸಿದ್ದಾರೆ.

ಕಥೆಯ ಓಟದ ದೃಷ್ಟಿಯಿಂದಲೂ ಶಿಲಿಂಗ ಕವಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ರುದ್ರಾಣಿಯ ಕನಸ್ಸಿನಲ್ಲಿ, ಮುಂದೆ ತಾವು ಊರನ್ನು ಬಿಡಬೇಕಾಗಿ ಬರುವುದರ ಮುನ್ಸೂಚನೆಯನ್ನು ಅಮುಗಿದೇವ ಕಾಣುವುದು ಅರ್ಥವತ್ತಾಗಿದೆ. ಸಿದ್ಧರಾಮ ತನಗೆ ಕೊಟ್ಟಣವನ್ನು ಹಾಕಿದೊಡನೆಯೇ ಆತ ಊರನ್ನು ಬಿಡಲು ನಿರ್ಧರಿಸುತ್ತಾನೆ. ಸಿದ್ಧರಾಮ ಉರಿಗಣ್ಣನ್ನು ಬಿಡುವುದಾಗಲೀ, ಈತ ಅದನ್ನು ನಂದಿಸಿ ಆತನನ್ನು ನಾಚಿಕೆಗೆ ಒಳಪಡಿಸುವುದಾಗಲೀ, ಮತ್ತು ಸಿದ್ಧರಾಮ ''ನನ್ನ ಊರಲ್ಲಿರಬೇಡ'' ಎಂದು ಅವನನ್ನು ಹೊರಡಿಸುವ ಸನ್ನಿವೇಶವಾಗಲೀ ಇಲ್ಲ. ಇಲ್ಲಿ ಸಿದ್ಧರಾಮನಿಗೆ ತಿಳಿಸದಂತೆ ಗುಪ್ತವಾಗಿ ಊರನ್ನು ತ್ಯಜಿಸಿ ಬಿಡುತ್ತಾನೆ ಅಮುಗಿದೇವ. ಈ ಬದಲಾವಣೆ ಇಬ್ಬರ ಪಾತ್ರದ ಘನತೆಯನ್ನೂ ಹೆಚ್ಚಿಸಿದೆ.

ಇವನು ಸೊನ್ನಲಿಗೆಯನ್ನು ಬಿಟ್ಟು ಇನ್ನೊಂದು ಊರಿಗೆ ಹೋದ ಎಂದಷ್ಟೇ ಇತರ ಕಥೆಗಳಲ್ಲಿದ್ದರೆ ಶಿವಲಿಂಗ ಕವಿ ಕಲ್ಯಾಣಕ್ಕೆ ಬಸವಾದಿಗಳ ಬಳಿಗೆ ಅವರು ಹೊರಟರೆಂದು ಸ್ಪಷ್ಟವಾಗಿ ಹೇಳುತ್ತಾನೆ. ಶ್ರೀ ಸಿದ್ದಯ್ಯ ಪುರಾಣಿಕರು ಬಹುಶಃ ಅವರು ಉದಾಹರಿಸಿರುವ ಹಂತಿಪದಗಳ ಆಧಾರಮೇಲೆ ಬರೆದಿರುವ ''ಆತ್ಮವಾನ್ ಅಮುಗಯ್ಯ''ನ ಕಥೆಯಲ್ಲಿ ಸ್ವಲ್ಪ ಬದಲಾವಣೆ ಕಂಡುಬರುತ್ತದೆ★೭. ಅಮುಗಿದೇವ ಮೊದಲು ಹೊರಟದ್ದು ಕಲ್ಯಾಣಕ್ಕೆಂಬುದಾಗಿಯೇ. ಆದರೆ ಮಧ್ಯದಲ್ಲಿ ಶಿವಪುರ ಎಂಬ ಊರಿನಲ್ಲಿ ಬಳಿಗೆ ಬಂದಾಗ ಶಿವನೇ ಹೊತ್ತುತರಲೆಂದು, ಸೊನ್ನಲಿಗೆಯಲ್ಲಿ ಬಿಟ್ಟು ಬಂದಿದ್ದ ಮೂರನೇ ಹೊರೆ ಅವರಿಗಿಂತ ಮುಂಚಿತವಾಗಿ ಅಲ್ಲಿ ಬಂದು ಕುಳಿತಿತ್ತು. ಅದರಿಂದ ಆ ದಂಪತಿಗಳು ತಾವು ಇಲ್ಲಿಯೇ ಉಳಿಯಬೇಕೆಂಬುದು ಶಿವನ ಸಂಕಲ್ಪವೆಂದು ಭಾವಿಸಿ ಶಿವಪುರದಲ್ಲಿಯೇ ನಿಲ್ಲುತ್ತಾರೆ. ಮುಂದೆ ಸಿದ್ಧರಾಮ ಪಶ್ಚಾತ್ತಾಪಗೊಂಡು ಬಂದನಂತರ ಅವನನ್ನು ಸಂತೈಸಿ ಅವನು

ಇಷ್ಟಲಿಂಗಧಾರಿಯಾದುದನ್ನು ಕಂಡು ಕಲ್ಯಾಣಕ್ಕೆ ಹೊರಡುತ್ತಾರೆ. ಆದರೆ ಶಿವಲಿಂಗ ಕವಿ ಅವರನ್ನು ನೇರವಾಗಿ ಕಲ್ಯಾಣಕ್ಕೆ ಕರೆದುಕೊಂಡು ಬಂದಿದ್ದಾನೆ. ಬಸವಾದಿ ಶರಣರು ಬಂದು ಅವರನ್ನು ಎದುರುಗೊಳ್ಳುವುದನ್ನೂ, ಆ ಶರಣರ ಸಮಾಗಮವನ್ನೂ ಚೆನ್ನಾಗಿ ವರ್ಣಿಸಿದ್ದಾನೆ.

ನಡೆದ ಘಟನೆ ತಿಳಿದನಂತರ ಸಿದ್ಧರಾಮ ಅತೀವ ಪಶ್ಚಾತ್ತಾಪದಿಂದ ಅವನನ್ನು ಹುಡುಕಿಕೊಂಡು ಕಲ್ಯಾಣಕ್ಕೇ ಬರುತ್ತಾನೆ. ಅವರು ತನ್ನ ಊರನ್ನು ಬಿಟ್ಟು ಬಂದ ವಿಷಯವೇ ಆತನಿಗೆ ತಿಳಿಯದು. ಸಿದ್ಧರಾಮ ಅವರನ್ನು ಊರಿಂದ ಹೊರಡಿಸಿದನೆನ್ನುವುದಕ್ಕಿಂತ ಶಿವಲಿಂಗ ಕವಿ ಮಾಡಿಕೊಂಡ ಈ ಮಾರ್ಪಾಡು ಅತ್ಯಂತ ಸೂಕ್ತವಾಗಿದೆ. ಅಮುಗಿದೇವನನ್ನು ಸಿದ್ಧರಾಮ ಕಲ್ಯಾಣದಲ್ಲಿ ಸಂಧಿಸಿದ ಸನ್ನಿವೇಶವೂ ಸಹ ಅವರಿಬ್ಬರ ವ್ಯಕ್ತಿತ್ವಕ್ಕೂ ಘನತೆಯನ್ನು ತಂದುಕೊಡುವಂತಿದೆ. ಅಮುಗಿದೇವನ ಕೋಪವಾಗಲೀ ಹಠವಾಗಲೀ ಅಲ್ಲಿ ವ್ಯಕ್ತವಾಗದೆ ಭಕ್ತಿಯೇ ಮೈವೆತ್ತ ಕ್ಷಮಾಮೂರ್ತಿಯಾಗಿ ಆತ ಕಂಗೊಳಿಸಿದ್ದಾನೆ. ಅವನನ್ನು ಕೈಲಾಸಕ್ಕೆ ಕರೆದೊಯ್ಯಬೇಕೆಂದು ಶಿವ, ಸೊನ್ನಲಿಗೆಗೆ ಕರೆದೊಯ್ಯಬೇಕೆಂದು ಸಿದ್ಧರಾಮ, ಇಬ್ಬರೂ ಕುತೂಹಲಿಗಳಾಗುತ್ತಾರೆ. ಕೊನೆಗೆ ಸಂಕಲ್ಪವೇ ಗೆಲ್ಲುತ್ತದೆ. ರುದ್ರಾಣಿಯನ್ನು ತನ್ನಲ್ಲಿ ವಿಲೀನಗೊಳಿಸಿಕೊಂಡು ಅಮುಗಿದೇವಯ್ಯ ಶಿವನಲ್ಲಿ ಲೀನನಾಗುತ್ತಾನೆ. ಹೀಗೆ ಅವರು ಕಲ್ಯಾಣಕ್ಕೆ ಬಂದ ಪ್ರಾರಂಭದಲ್ಲಿಯೇ ಅವರಿಗೆ ಮೋಕ್ಷವನ್ನು ಕೊಡಿಸಿಬಿಟ್ಟಿದ್ದಾನೆ ಶಿವಲಿಂಗ ಕವಿ. ಕಾವ್ಯದ ಪರಿಣಾಮ ರಮಣೀಯತೆಯ ದೃಷ್ಟಿಯಿಂದ ಇದು ಸೂಕ್ತವೆಂಬಂತೆ ತೋರಿದರು ಇದು ಐತಿಹಾಸಿಕ ಸತ್ಯವೆಂದು ಹೇಳುವಂತಿಲ್ಲ. ಕಲ್ಯಾಣದ ಕ್ರಾಂತಿಯನಂತರವೂ ಅಮುಗಿದೇವ ಬಹಳ ಕಾಲ ಜೀವಿಸಿದ್ದ. ವೀರಶೈವ ಧರ್ಮದ ಏಳುಬೀಳುಗಳನ್ನು ಕಣ್ಣಾರೆ ಕಂಡು ಅದರ ಪುನರುಜ್ಜೀವನಕ್ಕಾಗಿ ತನ್ನ ಶಕ್ತಿಯನ್ನು ವಿನಿಯೋಗಿದನೆಂಬುದು ಇತಿಹಾಸದಿಂದ ತಿಳಿದು ಬರುವ ಸಂಗತಿ.

ಈ ದೃಷ್ಟಿಯಿಂದ ಜನಪದ ಸಾಹಿತ್ಯದಲ್ಲಿ ದೊರೆಯುವ ಅಮುಗಿದೇವಯ್ಯನ ಕತೆ ಗಮನಾರ್ಹವಾದುದು. ಡಾ|| ಬಿ.ಎಸ್. ಗದ್ದಗಿಮಠ ಅವರು ಸಂಪಾದಿಸಿ ಕೊಟ್ಟಿರುವ ''ನೇಗಿಯ ಅಮುಗಯ್ಯ'' ಎಂಬ ಹಂತಿಯ ಪದ ಆತನ ವ್ಯಕ್ತಿತ್ವವನ್ನು ಸಮಗ್ರವಾಗಿ ಚಿತ್ರಿಸಿದೆ. ಅಲ್ಲಿ ಆ ಕೊನೆಯ ಭಾಗದ ಕಥೆ ಹೀಗೆ ಬರುತ್ತದೆ. ಕಲ್ಯಾಣ ಕೆಲವು ಕಾಲ ಅಮುಗಯ್ಯನ ಕಾರ್ಯಕ್ಷೇತ್ರವಾಯಿತು ಬಸವಣ್ಣನ ನೇತೃತ್ವದಲ್ಲಿ, ಮುಂದೆ ಕಲ್ಯಾಣಕ್ರಾಂತಿ ನಡೆದು ''ಬಿಜ್ಜಳನ ವಧೆಯಾತು, ಹೆಜ್ಜೆ ಮೀರಿತು ನಾಡು'', ಶಿವಶರಣರೆಲ್ಲಾ ಚೆದುರಿದರು. ಆಗ ''ಸೋಮನಾಥನ ನೆನಸಿ ಸೀಮೆ ಬಿಟ್ಟನು ಅಮುಗ'' ತನ್ನ ಇಷ್ಟದೈವವಾದ ಸೋಮನಾಥನ ಸನ್ನಿಧಿಯಲ್ಲಿ ತನ್ನ ಕಾಯಕವನ್ನು ಮುಂದುವರಿಸಲು ನಿರ್ಧರಿಸಿ ಹೂಳಜೆಯನ್ನು ಸೇರಿದ. ಅಲ್ಲಿ ''ಶಿವಕೂಟ ಕೂಡಿಸುತ ಶಿವಗೋಷ್ಠಿ ನಡೆಸಿದನು''. ಅವನ ಕೀರ್ತಿ ಹಬ್ಬಿತು. ದೇವಗಿರಿಯ ಯಾದವರಾಜ ಶೂರ ಸಿಂಘಣನು ''ಕೇಳಿದನು ಶರಣ ಅಮುಗಯ್ಯ ಗುರುವೆಂದು'' ಆತ ಹೂಳಜೆಗೆ ಬಂದು ಅಮುಗಯ್ಯನ ದರ್ಶನ ಆಶೀರ್ವಾದಗಳನ್ನು ಪಡೆದು ಇಥ್ಥೆ ಎಂಬ ಗ್ರಾಮವನ್ನು ಆತನಿಗೆ ದಾನವಾಗಿ ಕೊಟ್ಟನು. ಹೀಗೆ ಅಮುಗಿದೇವ ರಾಜಪೂಜಿತನಾಗಿ, ಜನಕೋಟಿಯ ಸೇವೆ ಮಾಡುತ್ತಾ ಲಿಂಗದಲ್ಲಿ ಬಯಲಾದನು, ಬೆಳಗಿನಲ್ಲಿ ಬೆಳಗಾದನು.

**ಹಂತಿಯ ಹಾಡೆಂದು ಪಂತ ಕಟ್ಟಲು ಬೇಡ**
**ಕಂತಿ ಕರಗುವುದು ನಿಂತಲ್ಲೆ! ಅಮುಗಯ್ಯ**
**ಕುಂತು ಎದೆಯೊಳಗೆ ಹಾಡಿಸಿದ ||**

ಎಂದು ಮುಕ್ತಾಯಮಾಡುತ್ತಾನೆ ಜಾನಪದ ಕವಿ. ಇದು ಅಮುಗಿದೇವನ ಜೀವನದ ಕೊನೆಯ ಭಾಗದ ಮೇಲೆ ಬೆಳಕನ್ನು ಬೀರುತ್ತದೆ. ಅಲ್ಲದೆ ಹಿಂದಾಗಲೇ ಹೇಳಿರುವಂತೆ ಹೂಳಜೆಯಲ್ಲಿ ದೊರೆತಿರುವ ಒಂದು ಶಾಸನವೂ ಸಹ ಈ ಕಥೆಯನ್ನು ಸಮರ್ಥಿಸುತ್ತದೆ.

ಪಂಡಾರಪುರಕ್ಕೆ ಸಮೀಪದಲ್ಲಿರುವ ಪುಳುಜ ಅಥವಾ ಪೂರ್ಣಜಾ (ಈಗ ಪುಳೂಜ ಅಥವಾ ಹೂಳಜ ಎಂದಾಗಿದೆ) ಎಂಬ ಗ್ರಾಮದಲ್ಲಿ ಲಿಂಗೇಶ್ವರ ಎಂಬ ದೇವಾಲಯವಿದೆ. ಆ ದೇವಾಲಯದಲ್ಲಿರುವ ಕನ್ನಡ ಶಿಲಾಶಾಸನ ಐತಿಹಾಸಿಕ ದೃಷ್ಟಿಯಿಂದ ಬಹಳ ಪ್ರಮುಖವಾದುದು. ಯಾದವರಾಜ ಸಿಂಘಣನು ಅಮುಗೇದವಯ್ಯನಿಗೆ ಭಕ್ತಿಯಿಂದ ದಾನ ಕೊಟ್ಟುದರ ವಿವರವಾದ ಉಲ್ಲೇಖ ಆ ಶಾಸನದಲ್ಲಿದೆ. ಶಾಸನದಲ್ಲಿ ಆ ದೇವಾಲಯವನ್ನು ಸಿದ್ಧಸೋಮನಾಥ ದೇವಾಲಯ ಎಂದು ಕರೆಯಲಾಗಿದೆ. ಹಿಂದೆ ಅದಕ್ಕೆ ಆ ಹೆಸರೇ ಇದ್ದು ಈಚೆಗೆ ಲಿಂಗೇಶ್ವರ ಎಂಬ ಹೆಸರು ಬಂದಂತೆ ತೋರುತ್ತದೆ. ದೇವರುಗಳ ಮತ್ತು ಅದಕ್ಕೆ ಅನುಗುಣವಾಗಿ ದೇವಾಲಯಗಳ ಹೆಸರು ಹೀಗೆ ಬದಲಾಯಿಸುವುದು ಅಪರೂಪವೇನೂ ಅಲ್ಲ. ಪಟ್ಟದಕಲ್ಲಿನ ಲೋಕೇಶ್ವರ ಮತ್ತು ತ್ರಿಲೋಕೇಶ್ವರ ದೇವಾಲಯಗಳು ಈಗ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳಾಗಿವೆ. ಹಾಗೆಯೇ ೧೨ನೇ ಶತಮಾನದಲ್ಲಿ ಪುಳಜದ ಈ ದೇವಾಲಯ ಸಿದ್ಧಸೋಮನಾಥನೇ ದೇವಾಲಯ ಎನ್ನಿಸಿಕೊಂಡಿದ್ದಿತೆಂಬುದಕ್ಕೆ ಈ ಶಾಸನ ಸಾಕ್ಷಿಯಾಗಿದೆ. ಈ ಸೋಮನಾಥನೇ ಅಮುಗಿದೇವಯ್ಯನ ಇಷ್ಟದೇವತೆಯಾಗಿದ್ದು ಅದನ್ನೇ ತನ್ನ ವಚನಗಳ ಅಂಕಿತವನ್ನಾಗಿ ಆತ ಇಟ್ಟುಕೊಂಡಿದ್ದಾನೆ. ಆ ದೇವಾಲಯದಲ್ಲಿ ದೊರೆತಿರುವ ಶಾಸನ ಅಮುಗಿದೇವನ ಐತಿಹಾಸಿಕ ಮಹತ್ತ್ವವನ್ನು ಹೆಚ್ಚಿಸಿದೆ.





ಈ ಶಿಲಾಶಾಸನದ ಕಾಲ ಕ್ರಿ.ಶ. ೧೨೦೦ ಎಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಈ ಶಾಸನದ ಮುಖ್ಯ ವಿಷಯವೇನೆಂದರೆ : ''ಶ್ರೀ ಸಿಂಘಣದೇವರಸರು ಸರ್ವಾರ್ಥ ಸಿದ್ಧಿ ಸಂವತ್ಸರ ಮಾಘಶುದ್ಧ ೧೧ ಸೋಮವಾರ'' ಪೂರ್ಣಜೆಗೆ ಬಂದು ದೇವತಾರ್ಚನೆಯ ಸಮಯದಲ್ಲಿ ಸ್ವಯಂಭು ಸಿದ್ಧ ಸೋಮನಾಥದೇವರ ಸೇವೆಗಾಗಿ 'ಇಥ್ಥೆ' ಎಂಬ ಗ್ರಾಮವನ್ನು ಅಮ್ಮಣದೇವರಸರ್ಗೆ ಧಾರಾಪೂರ್ವಕವಾಗಿ ದಾನ ಮಾಡಿದರು ಎಂಬುದು. ಯಾದವ ದೊರೆ ಸಿಂಘಣನ ಕಾಲದವರೆಗೂ ಅಮುಗಿದೇವ ಜೀವಿಸಿದ್ದನೆಂಬುದು ಮತ್ತು ತನ್ನ ವ್ಯಕ್ತಿತ್ವದಿಂದ ಸುತ್ತಲೂ ಪ್ರಭಾವವನ್ನು ಬೀರಿ ರಾಜಗೌರವವನ್ನು ಪಡೆಯಲು ಸಮರ್ಥನಾದನೆಂಬುದು ಇಲ್ಲಿ ಗಮನಿಸಬೇಕಾದ ಅಂಶಗಳು.

ಕಲ್ಯಾಣದ ಕ್ರಾಂತಿಯನಂತರ ಅಮುಗಿದೇವ ಅಲ್ಲಿಂದ ಹೊರಟು ತನ್ನ ಇಷ್ಟದೇವತೆ ಇದ್ದ ಪುಳಜೆಗೆ ಬಂದಿರಬೇಕು. ಅಲ್ಲಿ ಜನಜಾಗ್ರತಿಯನ್ನುಂಟುಮಾಡುತ್ತಾ ಆತ ದೀರ್ಘಕಾಲ ಜೀವಿಸಿದ್ದಂತೆ ತೋರುತ್ತದೆ. ಈ ಅವಧಿಯಲ್ಲಿ ಅನೇಕ ರಾಜಕೀಯ ಬದಲಾವಣೆಗಳಾದವು. ಬಿಜ್ಜಳನ ನಂತರ ಅವನ ಮಕ್ಕಳು ಸ್ವಲ್ಪಕಾಲ ರಾಜರಾಗಿದ್ದು ಮತ್ತೆ ಚಾಲುಕ್ಯವಂಶ ಸ್ಥಾಪಿತವಾದಂತೆ ತೋರುತ್ತದೆ. ಆದರೆ ಅಲ್ಪಕಾಲದಲ್ಲೇ ಅದೂ ಅಳಿಯಿತು. ಅಷ್ಟರಲ್ಲಿ ಇನ್ನೊಂದು ಕಡೆ ದೇವಗಿರಿಯ ಯಾದವರು ಪ್ರಬಲರಾಗುತ್ತಿದ್ದರು. ಅವರಲ್ಲಿ ಭಿಲ್ಲಮ (೧೧೮೭-೧೧೯೧) ಮತ್ತು ಮಗ ಜೈತಾಗಿ (೧೧೯೧-೧೨೧೦?) ಆಳಿತ ನಂತರ ಅವನ ಮಗ ಸಿಂಘಣ ರಾಜನಾಗಿ ಉತ್ತರಕರ್ಣಾಕವನ್ನೆಲ್ಲಾ ಆಕ್ರಮಿಸಿದ*೮. ಈತನೇ ಇಥ್ಥೆಯನ್ನು ಅಮುಗಿದೇವಯ್ಯನಿಗೆ ದಾನಕೊಟ್ಟವನು. ಇದನ್ನು ನೋಡಿದರೆ ಕಲ್ಯಾಣದ ಕ್ರಾಂತಿಯ ನಂತರ ಅಮುಗಿದೇವಯ್ಯ ಸುಮಾರು ೩೦-೩೫ ವರ್ಷಗಳಾದರೂ ಬದುಕಿದ್ದಿರಬೇಕೆಂಬುದು ಸ್ಪಷ್ಟವಾಗುತ್ತದೆ.

ಈ ದೀರ್ಘ ಅವಧಿಯಲ್ಲಿ ಧರ್ಮದ ನಂದಾದೀವಿಗೆಯನ್ನು ಬೆಳಗಿಸಲು ಈತ ಹೆಣಗಿದನು. ತನ್ನ ವ್ಯಕ್ತಿತ್ವದ ಉಜ್ವಲವಾದ ಪ್ರಭಾವವನ್ನು ಸುತ್ತಮುತ್ತಲಿನ ಜನಜೀವನದ ಮೇಲೆ ಬೀರಿದುದು ಕಂಡುಬರುತ್ತದೆ. ಪುಳಜೆಯಲ್ಲಿ ಮಾತ್ರವಲ್ಲದೆ ವಿಜಾಪುರದ ಸುತ್ತಮುತ್ತಲಿನ ಭಾಗಗಳಲ್ಲಿ ಮತ್ತು ಜತ್ತ, ಮುಧೋಳ ಸಂಸ್ಥಾನಗಳಲ್ಲಿ ಕೂಡ ಅಮುಗಿದೇವನ ಉಲ್ಲೇಖವಿರುವ ಅನೇಕ ದೇವಾಲಯಗಳಿರುವುದು ತಿಳಿದುಬರುತ್ತದೆ. ಈತನಿಗೆ '**ಅಮೂಕಸಿದ್ಧ**' ಎಂಬ ಹೆಸರು ಪ್ರಚಲಿತವಾಗಿರುವುದೂ ಮತ್ತು ಪುಳಜೆಯ ಶಾಸನದಲ್ಲಿ ಈತನಿಗೆ ಕೊಟ್ಟಿರುವ ''**ಸಿದ್ಧಕುಲಾರ್ಣವ ಪ್ರವರ್ಧನ ಸುಧಾಕರ**'' ಎಂಬ ವಿಶೇಷಣವೂ ಕುತೂಹರಕರವಾದ ಅಂಶಗಳು. ಕುರುಬ ಅಥವಾ ಹಾಲುಮತದವರ ಮೇಲೆ ವಿಶೇಷ ಪ್ರಭಾವವನ್ನು ಬೀರಿ ಅವರನ್ನು ಲಿಂಗವಂತರನ್ನಾಗಿ ಮಾಡಿದ ಸಿದ್ಧ ಅಮುಗಿದೇವಯ್ಯ. ಅಂದರೆ ಈತನ ವ್ಯಕ್ತಿತ್ವ ಬಹುಮುಖವೂ ಬಹುವ್ಯಾಪಕವೂ ಆಗಿದ್ದಿತೆಂಬುದನ್ನು ಕಂಡುಕೊಳ್ಳಬಹುದು.

ಮೇಲೆ ಹೇಳಿದ ಶಾಸನದಲ್ಲಿ ಈತನಿಗೆ ಕೊಟ್ಟಿರುವ ಇನ್ನೂ ಕೆಲವು ವಿಶೇಷಣಗಳು ಅದನ್ನು ಸಮರ್ಥಿಸುತ್ತವೆ. **''ಮುನಿವತ್ ಪೂಜಿತೋ ಯತಿಃ, ಶಿವಾಚಾರ್ಯೈಕ ನಿರತಃ'' ''ದೂರಶ್ರವಣ, ದೂರದಮಶನ ಜ್ಞಾನಸಂಪನ್ನ'' ''ಅಣಿಮಾದ್ಯಷ್ಟಗುಣ ಪರಿಪೂರ್ಣ'' ''ಮಹೇಶ್ವರ ಗಣಕುಲಾನ್ವಯ ದಿವಾಕರ'' ''ಶರಣ ಸಂತಾನ''** ಈ ಮೊದಲಾದ ಕೆಲವು ಮಾತುಗಳು ಆತನ ವ್ಯಕ್ತಿತ್ವದ ಕೆಲವು ಮುಖಗಳನ್ನು ಕಂಡುಕೊಳ್ಳಲು ಸಹಾಯಕವಾಗಿವೆ. ಇದಕ್ಕೆ ಪೂರಕವಾಗಿ ಆತನ ವ್ಯಕ್ತಿತ್ವದ ಕೆಲವು ಮುಖಗಳನ್ನು ಕಂಡು ಕೊಳ್ಳಲು ಸಹಾಯಕವಾಗಿವೆ. ಇದಕ್ಕೆ ಪೂರಕವಾಗಿ ಆತನ ವಚನಗಳೂ ಆ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಡುತ್ತವೆ. ಆತನ ವಚನಗಳು ಹೆಚ್ಚಾಗಿ ಸಿಕ್ಕಿಲ್ಲ. ಶ್ರೀ ಫ.ಗು. ಹಳಕಟ್ಟಿಯವರು ಆತನ ಮತ್ತು ಆತನ ಪತ್ನಿ ರಾಯಮ್ಮನ ಈಗ ಸಿಕ್ಕಿರುವಷ್ಟೇ ವಚನಗಳನ್ನು ಪ್ರಕಟಸಿದ್ದಾರೆ. ಅವುಗಳಲ್ಲಿ ಅಮುಗಿದೇವನ ಕೆಲವು ವಚನಗಳನ್ನು ಇಲ್ಲಿ ನೋಡಬಹುದು :

*''ಅಂಗಾಶ್ರಯವ ಕಳೆದು ಲಿಂಗಾಶ್ರಯವ ಮಾಡಿದ ಗುರುವೇ ಶರಣು; ಶ್ರೀ ಗುರುವೇ ಶರಣು. ಪರಮ ಸುಖವ ತೋರಿದೆಯಾಗಿ ಮಹಾಘನ ಸೋಮೇಶ್ವರನ ಸಾಹಿತ್ಯವ ಮಾಡಿ ನಿಜ ನಿವಾಸದಲ್ಲಿರಿಸಿದೆಯಾಗಿ.''*

*''ಗುರುಲಿಂಗದ ಕೃಪೆಯಿಂದ ಸಜ್ಜನ ಶರಣರ ಸುಖವ ಕಂಡೆ. ಏನೆಂದುಪಮಿಸುವೆನಯ್ಯ ಗುರುಲಿಂಗದ ಮಹಿಮೆಯನ್ನು ಮಹಾಘನ ಸೋಮೇಶ್ವರನೆಂಬ ಗುರುಲಿಂಗವ ತೋರಿದವನಾಗಿ.''*

*''ಕಂಗಳ ಕತ್ತಲೆಯ ಕೆಡಿಸಿದ ರವಿಯ ಚಂದದಂತಾಯಿತೆನ್ನ ಗುರುವಿನುಪದೇಶ. ಇಂದುಕಾಂತದ ಶಿಲೆಯ ನಿಂದು ಸೋಂಕಿದಂತಾಯಿತೆನ್ನ ಗುರುವಿನುಪದೇಶ. ಕೊಡನೊಳಗಣ ಬಯಲ ಹಂಚಿಕೊಂಡಾಯಿತ್ತೆನ್ನ ಗುರುವಿನುಪದೇಶ. ದರ್ಪಣಕೆ ದರ್ಪಣವ ತೋರಿಸಿದಂತಾಯಿತೆನ್ನ ಗುರುವಿನುಪದೇಶ. ಮಹಾಘನ ಸಿದ್ಧಸೋಮನಂತಾಯಿತೆನ್ನ ಗುರುವಿನುಪದೇಶ.''*

*''ಜ್ಞಾನದಲರಿದರೇನಯ್ಯಾ ಸತ್ಕ್ರಿಯಾಚಾರಿಯಾಗದನ್ನಕ್ಕರ? ನೆನೆದ ಮಾತ್ರದಲ್ಲಿ ಕಾಂಬುದೆ ಕಾರ್ಯದಲ್ಲಿಲ್ಲದೆ? ಕುರುಡ ಕಾಣ ಪಥವ. ಹೆಳವ ನಡೆಯಲರಿಯ. ಒಂದಿಲ್ಲದಿದ್ದರೆ ಒಂದಾಗದು. ಜ್ಞಾನವಿಲ್ಲದ ಕ್ರಿ, ಜಡ, ಇಲ್ಲದ*

*ಜ್ಞಾನ ವಾಗ್ಜಾಲ, ಭ್ರಾಂತು. ಇದು ಕಾರಣ ಸಿದ್ಧಸೋಮ ನಾಥನಲ್ಲಿ ಎರಡೂ ಬೇಕು.''*

*''ಶಿವನ ನೆನೆದರೆ ಭವಹರಿವುದೆಂಬ ವಿವರಗೇಡಿಗಳ ಮಾತ ಕೇಳಲಾಗದು. ಅದೇನು ಕಾರಣವೆಂದರೆ ಜ್ಯೋತಿಯ ನೆನೆದರೆ ಕತ್ತಲೆ ಹರಿವುದೆ? ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವದೆ? ರಂಭೆಯ ನೆನೆದರೆ ಕಾಮದ ಕಳವಳ ಹಿಂಗುವುದೆ? ನೆನೆದರಾಗದು. ನಿಜದಲ್ಲಿ ನಿಂದು ನಿರ್ಧರಿಸದನ್ನಕ್ಕ ಸದ್ಗುರು ಸೋಮನಾಥನೆಂಬ ಲಿಂಗವ ನೆನೆಯಯ ಬಾರದು.''*

*''ಕಾಯ ಲಿಂಗಾರ್ಪಿತವಾದರೆ ಕರ್ಮವಿಲ್ಲ. ಜೀವ ಲಿಂಗಾರ್ಪಿತವಾದರೆ ಜನಿತವಿಲ್ಲ. ಭಾವ ಲಿಂಗಾರ್ಪಿತ ವಾದರೆ ಭ್ರಮೆಯಿಲ್ಲ. ಅರುಹು ಲಿಂಗಾರ್ಪಿತವಾದ ಬಳಿಕ ಆ ಪ್ರಸಾದವ ಗ್ರಹಿಸದಾಗಿ ಕುರುಹು ಮುನ್ನಿಲ್ಲ. ಮಾಯಾ ಪ್ರಪಂಚವನತಿಗಳೆದು ನಿಮಗರ್ಪಿಸ ಬಲ್ಲನಾಗಿ ಆತನೇ ಶರಣ. ಬೆಚ್ಚುತೆ ಬೆರೆಸಿ ಅಚ್ಚೊತ್ತಿದಂತೆ, ಅಪ್ಪು ಒಳಕೊಂಡ ಆಣಿಕಲ್ಲಿನಂತೆ, ಜ್ಯೋತಿಯಿಂದ ತಮವಿಲ್ಲದಂತೆ, ಜಲ ಉಂಡ ಮುತ್ತಿನಂತೆ, ಬಯಲುಂಡ ಬೆಳಗಿನಂತೆ, ಇದ್ದನಾಗಿ ಮಹಾಘನ ಸದ್ಗುರು ಸಿದ್ಧಸೋಮನಾಥ ನಿಮ್ಮ ಶರಣರ ಹೆಸರಡಗಿದ ಲಿಂಗೈಕ್ಯರೆಂಬೆ.''*

*''ಇಹಪರನಲ್ಲ, ಪರಾಪರನಲ್ಲ; ಕಾಮಿಸಿ ಕಾಮಿಯಲ್ಲ; ಭಾವಿಸಿ ಭಾವಿಯಲ್ಲ. ಅನಾಯಮ ನಿರಂಜನನು, ಸಿದ್ಧಸೋಮನಾಥಲಿಂಗ, ನಿಮ್ಮ ಶರಣ ಬಳಸಿಯೂ ಬಳಸುವವನಲ್ಲ.''*

*''ಸಾವನಲ್ಲ ಸ್ವರೂಪ ಕುರುಹಿಸನಾಗಿ, ನಿರವಯನಲ್ಲ ನಿರೂಪ ಭಾವಿಸಲನಾಗಿ, ದ್ವೈತಿಯಲ್ಲ ಸೇವ್ಯ ಸೇವಕನೆಂಬ ಭಯವಳಿದುಳಿದವನಾಗಿ. ಅದ್ವೈತಿಯಲ್ಲನಾಹಂ ಕೋಹಂ ಸೋಹಮೆಂಬ ಭ್ರಮೆಯಳಿದುಳಿದನಾಗಿ. ಇಂತೀ ಸಕಲ ಭ್ರಮೆಯಳಿದು ಹೋಹನಲ್ಲಿ ನಿಷ್ಪತ್ತಿಯಾಗಿಪ್ಪ ಸಿದ್ಧ ಸೋಮನಾಥಲಿಂಗ''* ೯.*

ಈ ಮೊದಲಾದ ವಚನಗಳನ್ನು ನೋಡಿದರೆ ಆತನ ವಚನಗಳು ಇನ್ನೂ ಹೆಚ್ಚಾಗಿ ಸಿಕ್ಕದೇ ಇರುವುದರ ಕೊರತೆ ಎದ್ದು ಕಾಣುತ್ತದೆ. ಆತನ ಪರಿಣತ ಮನಸ್ಸು ಮತ್ತು ಸಮತೋಲನ ದೃಷ್ಟಿಗಳನ್ನು ಈ ವಚನಗಳಲ್ಲಿ ಕಾಣಬಹುದಾಗಿದೆ.

ಒಟ್ಟಿನಲ್ಲಿ ಅಮುಗಿದೇವಯ್ಯ ಮತ್ತು ಆತನ ಪತ್ನಿ, ವಚನಕಾರರಾಗಿ ಕಲ್ಯಾಣದಲ್ಲಿದ್ದು ಬಸವಣ್ಣನವರ ಮಹಾ ಮಣಿಹದಲ್ಲಿ ಪಾಲ್ಗೊಂಡಿದ್ದರು. ನೇಯ್ಗೆಯ ಕಾಯಕವನ್ನು ಅವಲಂಬಿಸಿದ್ದ ಆ ದಂಪತಿಗಳು ಸೊನ್ನಲಿಗೆಯಿಂದ ಬಂದು ಅಲ್ಲಿ ಕಾರ್ಯಕ್ಷೇತ್ರದಲ್ಲಿ ಸೇರಿಕೊಂಡಿರಬೇಕು. ಕಲ್ಯಾಣದ ಕ್ರಾಂತಿಯೊಡನೆ ಅದು ಮುಕ್ತಾಯಗೊಂಡಾಗ ಅಲ್ಲಿಂದ ಹೊರಟು ಪುಳಜೆಯ ತನ್ನ ಇಷ್ಟದೇವತಾ ಸನ್ನಿಧಿಗೆ ಬಂದು ಸಾಧನೆಯ ಮಾರ್ಗದಲ್ಲಿ ಮುನ್ನಡೆದಿರಬೇಕು. ಕನ್ನಡಕೃತಿಗಳಲ್ಲಿ ಇವನ ಸಮಗ್ರ ಜೀವನ ಕಾಣಸಿಗದೆ ಸೊನ್ನಲಿಗೆಯಿಂದ ಶಿವ ಕೈಲಿ ಹೊರೆಯನ್ನು ಹೊರಸಿಕೊಂಡು ಬಂದ ಸಾಂಕೇತಿಕ ನಿರೂಪಣೆಯೇ ಪ್ರಧಾನವಾಗಿದೆ. ಆದರೆ ಒಟ್ಟಾಗಿ ಅವನ ಜೀವನವನ್ನು ನೋಡುವುದಾದರೆ ಅಲ್ಲಿ ಮೂರು ಘಟ್ಟಗಳನ್ನು ಕಾಣುತ್ತೇವೆ. ಕಲ್ಯಾಣಕ್ಕೆ ಬರುವ ಮುನ್ನ ಸೊನ್ನಲಿಗೆಯಲ್ಲಿ ಇಷ್ಟಲಿಂಗಾನಿಷ್ಠೆಯ ಕಾಯಕ ಜೀವನ; ಅನಂತರ ಕಲ್ಯಾಣದ ಶರಣರೊಡನೆ ಅನುಭಾವದ ಅಂತರಂಗಜೀವನ; ಮತ್ತು ಕೊನೆಯಲ್ಲಿ ಪುಳಜೆಯ ಸಿದ್ಧಸೋಮನಾಥನ ಸನ್ನಿಧಿಯಲ್ಲಿ ಧರ್ಮಪ್ರಸಾರದ ಸಾರ್ಥಕಜೀವನ – ಹೀಗೆ ಅವನ ಜೀವನ ಬೆಳೆದು ಪೂರ್ಣಗೊಂಡುದನ್ನು ಗುರುತಿಸಬಹುದು.

**ಅಡಿ ಟಿಪ್ಪಣಿ**

೧. ಪುಳಜೆಯು ಪಂಡರಪುರಕ್ಕೆ ಸನಿಹದಲ್ಲಿದ್ದು, ಅಲ್ಲಿ ಅಮುಗಿದೇವಯ್ಯನ ದೇವಾಲಯವೂ, ಶಾಸನವೂ ಇವೆ. – ಸಂ.
೨. ಸಂ. ಸ.ಸ. ಮಾಳವಾಡ: ರಾಘವಾಂಕ ಚಾರಿತ್ರ ೧, ಸಂಧಿ ೧೫, ಪದ್ಯ ೭೩ರಿಂದ ೮೧ರವರೆಗೆ.
೩. ಡಾ. ಎಲ್. ಬಸವರಾಜು, ಶಿವದಾಸಗೀತಾಂಜಲಿ, ವೇದಿಕೆ ಪುಟ ೫೪.
೪. ಸಂ.ಸಿ. ಮಹಾದೇವಪ್ಪ : ಶಂಕರದೇವರ ಕಂದ, ಪೀಠಿಕೆ, ಪು. XXI.
೫. ಸಂ.ಎಚ್. ತಿಪ್ಪೇರುದ್ರಸ್ವಾಮಿ, ಅಮುಗಿದೇವಯ್ಯಗಳ ಸಾಂಗತ್ಯ, ಪೀಠಿಕೆ.
೬. ಶಿವಾನುಭವ, ಸಂಪುಟ ೭, ಸಂಚಿಕೆ ೩, ಪುಟ ೪೦೭.
೭. ಸಿದ್ದಯ್ಯ ಪುರಾಣಿಕ : ಶರಣಚರಿತಾಮೃತ.
೮. ಇವನು ೧೨೧೦ರಿಂದ ೧೨೪೭ರವರೆಗೆ ಆಳಿದನೆಂಬುದು ಚರಿತ್ರಕಾರರ ಅಭಿಪ್ರಾಯ. ಆದರೆ ಮೇಲಿನ ಶಾಸನ ೧೨೦೦ರಲ್ಲಿ ರಚಿತವಾದುದು. ಆ ಕಾಲಕ್ಕಾಗಲೇ ಅವನು ರಾಜನಾಗಿದ್ದನೆಂಬುದು ಅದರಿಂದ ತಿಳಿಯುತದೆ. ೧೨೧೧ರಿಂದ ಅವನು ರಾಜನಾದನೆಂಬುದನ್ನು ಶ್ರೀ ಅಳತೇಕರ್ ಅವರು ಸಂದೇಹಾಸ್ಪದವಾಗಿ ಉಳಿಸಿದ್ದಾರೆ. (Early History of Deccan-Ed. G. Yazdani) ಆತ ಯುವರಾಜನಾಗಿದ್ದಾಗಲೇ ಶಾಸನಾದಿಗಳ ರಚನೆಗೆ ತೊಡಗಿರಬಹುದೆಂಬ ಅಭಿಪ್ರಾಯವೂ ಉಂಟು.
೯. ಶಿವಾನುಭವ, ಸಂಪುಟ ೭, ಸಂಚಿಕೆ ೩.

(ಕೃಪೆ : ವೀರಶೈವ ದೀಪ್ತಿ) ❋





# ಶೈಕ್ಷಣಿಕ ಮೇಲ್ವಿಚಾರಣೆ

– ಸಿ. ಹನುಮೇಗೌಡ
ನಿವೃತ್ತಿ ಶಿಕ್ಷಣ ನಿರ್ದೇಶಕರು
ಬೆಂಗಳೂರು

ಶಿಕ್ಷಣ ಮೇಲ್ವಿಚಾರಣೆ ಬಹಳ ಮಹತ್ವದ್ದು. ನಾವಿಕನಿಲ್ಲದ ನಾವೆ ಯಾವ ಬಂಡೆಗಾದರೂ ಬಡಿಯಬಹುದು. ಹಾಗೆಯೇ ಗುರಿಯಿಲ್ಲದ ಶಿಕ್ಷಣ ರಾಷ್ಟ್ರವನ್ನು ಯಾವ ದುರಂತಕ್ಕಾದರೂ ಈಡುಮಾಡಬಹುದು. ಅಂತೆಯೇ ಕಡಿವಾಣವಿಲ್ಲದ ಕುದುರೆ ಎಲ್ಲಿಗಾದರೂ ಹೊತ್ತೊಯ್ಯಬಹುದು. ಹಾಗೆಯೇ ಮೇಲ್ವಿಚಾರಣೆ ಇಲ್ಲದ ಶಿಕ್ಷಣ ಯಾವ ದಿಕ್ಕಿಗಾದರೂ ನಮ್ಮನ್ನು ಕರೆದೊಯ್ಯಬಹುದು. ಆದ್ದರಿಂದ ಇವುಗಳ ಬಗ್ಗೆ ಅರಿಯುವುದು ಶಿಕ್ಷಣತಜ್ಞರ ಆದ್ಯಕರ್ತವ್ಯವೆಂಬುದನ್ನು ಅರಿಯಬೇಕು. ಆಗಲೇ ಸಮಾಜ ನಿರ್ದಿಷ್ಟವಾದ ಗುರಿಯತ್ತ ಸಾಗಲು ಸಾಧ್ಯ. ಗುರಿಯಿಲ್ಲದ ಶಿಕ್ಷಣ ಮೇಲ್ವಿಚಾರಣೆಯಿಲ್ಲದ ಆಡಳಿತ ಸಮಾಜಕ್ಕೆ ಮಾರಕ.

ಮಗು ಶಾಲೆಯಲ್ಲಿ ಏನನ್ನು ಕಲಿಯಬೇಕು ಎನ್ನುವುದರ ಬಗ್ಗೆ ಒಂದೊಂದು ಕಲ್ಪನಾ ಭಾವನೆ ಇರುತ್ತದೆ. ಆಧ್ಯಾತ್ಮಿಕತೆಯಲ್ಲಿ ನಂಬಿಕೆ ಇರುವವರು ನೈತಿಕತೆ, ಸಭ್ಯತೆ ಹಾಗೂ ಪ್ರಮಾಣಿಕತೆಗಳ ಕಡೆ ಹೆಚ್ಚು ಗಮನ ಹರಿಸಿದರೆ, ಪ್ರಗತಿಪರರು ವಿಷಯಜ್ಞಾನಕ್ಕೆ ಹೆಚ್ಚು ಆದ್ಯತೆ ನೀಡುತ್ತಾರೆ. ಸನ್ನಿವೇಶ, ದೇಶ, ಕಾಲ ಇವುಗಳೂ ಶಿಕ್ಷಣದ ಗುರಿಗಳನ್ನು ನಿರ್ಧರಿಸುತ್ತವೆ. ಪ್ರಜಾಪ್ರಭುತ್ವದ ರಾಷ್ಟ್ರದಲ್ಲಿ ಉತ್ತಮ ನಾಗರೀಕರನ್ನು ಹಾಗೂ ರಾಷ್ಟ್ರಭಕ್ತರನ್ನು ತಯಾರಿಸಲು ರಾಷ್ಟ್ರ ಇಚ್ಛಿಸಿದರೆ, ಸಮಾಜವಾದದ ರಾಷ್ಟ್ರದಲ್ಲಿ ಸಮಾಜದ ಶ್ರೇಯೋಭಿವೃದ್ಧಿಗೆ ತಮ್ಮ ಸ್ವಾರ್ಥತೆಯನ್ನು ತ್ಯಾಗಮಾಡಿ ಸಮಾಜಕ್ಕೆ ದುಡಿಯಬೇಕಾಗುತ್ತದೆ. ಸ್ವಭಾವತಃ ಮನುಷ್ಯ ಸಂಘಜೀವಿ. ಸಮಾಜದಿಂದ ಅವನನ್ನು ಬೇರ್ಪಡಿಸುವಂತಿಲ್ಲ. ಸಮಾಜ ಹಾಗೂ ರಾಷ್ಟ್ರದ ಭವಿಷ್ಯ ಶಾಲಾ ಕಾಲೇಜುಗಳ ತರಗತಿಗಳಲ್ಲಿ ರೂಪಿತವಾಗುತ್ತದೆಯೇ ಹೊರತು ವಾಗ್ಮಿಯ ಕಲೆಯಿಂದಲ್ಲ. ಶಾಲಾ ಕಾಲೇಜುಗಳಿಂದ ಹೊರಬರುವ ವಿದ್ಯಾರ್ಥಿಗಳ ಸಂಖ್ಯೆ ಹಾಗೂ ಅವರಿಗೆ ಕೊಡುವ ಶಿಕ್ಷಣದ ಆಧಾರದ ಮೇಲೆ ದೇಶದ ಭವಿಷ್ಯ ನಿರ್ಧರಿತವಾಗುತ್ತದೆ. ಆದ್ದರಿಂದ ಶಿಕ್ಷಣದ ಗುರಿ. ಅದರ ಸತ್ವ ಹಾಗೂ ಅದು ಅನುಷ್ಠಾನಕ್ಕೆ ಬಂದಿದೆಯೆ ಎನ್ನುವುದರ ಬಗ್ಗೆ ಮಾಡುವ ಮೇಲ್ವಿಚಾರಣೆ ರಾಷ್ಟ್ರದ ಸರ್ವತೋಮುಖದ ಏಳಿಗೆಗೆ ಅತ್ಯವಶ್ಯಕವೆಂಬುದನ್ನು ಮರೆಯಬಾರದು. ಶಿಕ್ಷಣದ ಗುರಿಗಳನ್ನು ರೂಪಿಸುವಾಗ ಶಿಕ್ಷಣತಜ್ಞರ ಮೇಲ್ವಿಚಾರಣೆ ಅಗತ್ಯ ಹಾಗೂ ಶಾಲೆಗಳಲ್ಲಿ ಅವುಗಳನ್ನು ಅನುಷ್ಠಾನಕ್ಕೆ ತರುವಾಗ ಶಿಕ್ಷಕರು, ಶಾಲಾ ಮುಖ್ಯಸ್ಥರ ಮತ್ತು ವ್ಯವಸ್ಥಾಪಕರ ಮೇಲ್ವಿಚಾರಣೆ ಅವಶ್ಯಕ.

***ಕುಟುಂಬ :*** ಮನೆ ಮಗುವಿಗೆ ಮೊದಲ ಪಾಠಶಾಲೆ, ತಾಯಿಯೇ ಪ್ರಥಮ ಗುರು. ಇಲ್ಲಿ ಕಲಿತ ವಿದ್ಯೆ ಮಗುವಿನಲ್ಲಿ ಜೀವನಾದ್ಯಂತ ಉಳಿಯುತ್ತದೆ. ಶಾಲೆಯು ಸಾಂಪ್ರದಾಯಕ ಶಿಕ್ಷಣವನ್ನು ಕೊಟ್ಟರೆ; ಮನೆ ಸಾಂಪ್ರದಾಯರಹಿತ ಶಿಕ್ಷಣವನ್ನು ಕೊಡುತ್ತದೆ. ಆದ್ದರಿಂದ ಇಲ್ಲಿ ತಾಯಿಯ ಪಾತ್ರ ಹಿರಿದಾದದ್ದು. ಮಕ್ಕಳ ಪ್ರಗತಿಯ ಮೇಲ್ವಿಚಾರಣೆಯೂ ಅವಳದೇ ಆಗಿರುತ್ತದೆ.

***ಶಾಲೆ :*** ಶಾಲೆಯು ಸಾಂಪ್ರದಾಯಿಕ ಶಿಕ್ಷಣದ ಕೇಂದ್ರಬಿಂದು. ಶಾಲೆಯು ನಿರ್ದಿಷ್ಟವಾದ ಯೋಜನೆಗಳ ಪರಂಪರಾ ಕ್ರಮದ ಅನುಭವದ ಮಂದಿರವದು. ಶಾಲೆಯು ಸಮಾಜದ ಅನುಭವದ ಪ್ರತಿಭಾನ್ವಿತ ಅನರ್ಘ್ಯರತ್ನಗಳ ಕಣಜ. ಸಾಮಾಜಿಕ ಬದಲಾವಣೆಗಳು ಶಾಲೆಗಳಿಂದ ಹೊರಹೊಮ್ಮುತ್ತವೆ. ಶಾಲೆ ವಿವೇಚನಾತ್ಮಕ ವ್ಯಕ್ತಿಗಳನ್ನು ತನ್ನ ಅನುಭವದ ಮೂಸೆಯಿಂದ ಎರಕಹೊಯ್ದು ಹೊರತರುತ್ತದೆ. ಮಕ್ಕಳಿಗೆ ಶಿಕ್ಷಣ ಕೊಡುವುದು; ಸಮಾಜದ ಅಭಿವೃದ್ಧಿಗೆ ಶ್ರಮಿಸುವುದು. ಸ್ವಾತಂತ್ರ್ಯ, ಸಮಾನತೆ, ವಿಶ್ವಭ್ರಾತೃತ್ವವನ್ನು ಬೆಳೆಸುವುದು; ನೈತಿಕತೆ ಮತ್ತು ಶಿಸ್ತನ್ನು ಬೆಳೆಸುವುದು ಶಾಲೆಗಳ ಆದ್ಯ ಕರ್ತವ್ಯವಾಗಿದೆ. ಇವುಗಳನ್ನು ಮಕ್ಕಳು ತಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಂಡಿದ್ದಾರೆಯೆ ಅಥವಾ ಇಲ್ಲವೆ ಎಂಬುದನ್ನು ಶಿಕ್ಷಕರು ಹಾಗೂ ಮುಖ್ಯಸ್ಥರು ಮೇಲ್ವಿಚಾರಣೆ ಮಾಡಿ ದೃಢಪಡಿಸಿಕೊಳ್ಳಬೇಕು.

***ಸಮಾಜ :*** ಇದು ಪ್ರಜಾಪ್ರಭುತ್ವ ಹಾಗೂ ಸಮತಾವಾದದ ಕಾಲ; ಕೇವಲ ಕೆಲವೇ ವ್ಯಕ್ತಿಗಳ ಕಾಲವಲ್ಲ. ವ್ಯಕ್ತಿ ಬೆಳೆಯಲು ಸಮಾಜ ಸಹಕಾರಿ. ಶಿಕ್ಷಣವಿಲ್ಲದ ವ್ಯಕ್ತಿಗಳ ಸಮಾಜ ಅಂಧ ಸಮಾಜ. ಒಂದು ಕಡೆ ಸಮಾಜವು ವ್ಯಕ್ತಿಯಿಂದ ಪ್ರಭಾವಿತವಾದರೆ ಮತ್ತೊಂದು ಕಡೆ ಸಮಾಜದಿಂದ ವ್ಯಕ್ತಿಯು ಪ್ರಭಾವಿತನಾಗುತ್ತಾನೆ. ಆದ್ದರಿಂದ ಶಿಕ್ಷಣ ಪ್ರತಿಯೊಬ್ಬ ವ್ಯಕ್ತಿಗೂ ಅತ್ಯಾವಶ್ಯಕ.

***ಧರ್ಮ :*** ಧರ್ಮದ ಅವಿಭಾಜ್ಯ ಅಂಗಗಳಾದ ಸೌಂದರ್ಯ ಮತ್ತು ಶೀಲಗಳ ಮೌಲ್ಯಗಳನ್ನು ಮಕ್ಕಳು ಮೈಗೂಡಿಸಿಕೊಳ್ಳಬೇಕು. ಧರ್ಮಪಾಲನೆಯಿಂದ ಮಾತ್ರ ನಾವು ನಮ್ಮ ಗುರಿಯನ್ನು ಮುಟ್ಟಬಲ್ಲೆವು. ಧರ್ಮದ ಆಧಾರದ ಮೇಲೆ ಯಾವ ಯುದ್ಧವೂ ನಡೆಸಬಾರದೆಂದು ಮಕ್ಕಳಿಗೆ ತಿಳಿಸಬೇಕು. ಎಲ್ಲಾ ಧರ್ಮಗಳ, ಧರ್ಮಗ್ರಂಥಗಳ, ಧರ್ಮತತ್ತ್ವಗಳ, ಧರ್ಮ ಸಂಸ್ಥಾಪಕರ, ಧರ್ಮಕ್ಕೆ ಸಂಬಂಧಿಸಿದ ಸ್ಥಳಗಳ ಹಾಗೂ ಪೂಜಾ ವಸ್ತುಗಳ ಬಗ್ಗೆ ಮಕ್ಕಳಲ್ಲಿ ಗೌರವ, ತಾಳ್ಮೆ ಹಾಗೂ ಪೂಜ್ಯಭಾವನೆ ಬೆಳೆಯುವಂತೆ ಮಾಡಬೇಕು. ಎಲ್ಲ ಧರ್ಮಗಳಲ್ಲಿ ಅನಂತ ಶಕ್ತಿಯ ಆರಾಧನೆ ಇರುವುದರಿಂದ ಅವುಗಳ ಬಗ್ಗೆ ಮಕ್ಕಳಲ್ಲಿ ಭೇದಭಾವ ಮೂಡದಂತೆ ಶಿಕ್ಷಕರು ನೋಡಿಕೊಳ್ಳಬೇಕು. ಮುಖ್ಯೋಪಾಧ್ಯಾಯರಿಂದ ಇದರ ಮೇಲ್ವಿಚಾರಣೆಯೂ ಅಗತ್ಯವಾಗಿ ಬೇಕಾಗಿದೆ.

***ದಿನಕ್ಕೊಂದು ಒಳ್ಳೆಯ ಕೆಲಸ :*** ನಾವು ವಿಜ್ಞಾನದ ಯುಗದಲ್ಲಿದ್ದೇವೆ. ಮೇರು ಹಿಮಗಿರಿಯನ್ನೇರಿದ್ದೇವೆ; ಸಾಗರೋಲ್ಲಂಘನೆ ಮಾಡಿದ್ದೇವೆ. ನಭೋಮಂಡಲವನ್ನು ಭೇದಿಸಿ ಚಂದ್ರನನ್ನು ಮಾನವ ತನ್ನ ಪುಟ್ಟಪಾದದಿಂದ ಮೆಟ್ಟಿ ಮಂಗಳ, ಶುಕ್ರ ಗ್ರಹಗಳ ಕಡೆ ಧಾವಿಸುತ್ತಿದ್ದಾನೆ. ಆದರೂ ಭೂಮಿಯ ಮೇಲೆ ಮಾನವನಂತೆ ಬಾಳುವುದನ್ನು ಕಲಿತಿಲ್ಲ. ಆದ್ದರಿಂದ ಸಮಾಜಕ್ಕೆ, ರಾಷ್ಟ್ರಕ್ಕೆ ಅಣು ಸೇವೆಯನ್ನು ಸಲ್ಲಿಸಬೇಕಾದರೆ ಮಾನವ ಪರೋಪಕಾರ ಮಾಡುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕಾದರೆ ಬಾಲ್ಯದಲ್ಲಿಯೇ ಪರೋಪಕಾರ ಮಾಡಬೇಕು. ಆದ್ದರಿಂದ ದಿನಕ್ಕೊಂದು ಒಳ್ಳೆಯ ಕೆಲಸವನ್ನು ಮಕ್ಕಳು ಮಾಡುವಂತೆ ಪ್ರೇರೇಪಿಸಬೇಕು. ಉದಾಹರಣೆಗೆ ಬಾಯಾರಿದವರಿಗೆ ನೀರು ಕೊಡುವುದು. ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ಹೆಂಗಸರಿಗೆ, ವಯಸ್ಸಾದವರಿಗೆ ಸ್ಥಳ ಕೊಡುವುದು. ತಂದೆ ತಾಯಿಗಳಿಗೆ ಸಹಾಯಮಾಡುವುದು ಇತ್ಯಾದಿಗಳನ್ನು ಮಾಡಿ ಮಕ್ಕಳು ತಮ್ಮ ದಿನಚರಿಯಲ್ಲಿ ಬರೆಯಬೇಕು. ಶಿಕ್ಷಕರು ಅದನ್ನು ನೋಡಿ ಸಹಿ ಹಾಕಬೇಕು. ಮಕ್ಕಳು ಮಾಡುವ ಕೆಲಸದ ಪ್ರಮಾಣ ಮುಖ್ಯವಲ್ಲ. ಒಳ್ಳೆಯದನ್ನೇ ಆಲೋಚಿಸಿ, ಅದನ್ನೇ ಮೈಗೂಡಿಸಿಕೊಂಡು ಅದನ್ನು ಅನುಷ್ಠಾನಕ್ಕೆ ತರುವ ಪ್ರವೃತ್ತಿಯನ್ನು ಮಕ್ಕಳು ಬೆಳೆಸಿಕೊಳ್ಳಬೇಕು. ಇದರಿಂದ ಸೇವಾ ಮನೋಭಾವನೆ ಅವರಲ್ಲಿ ಬೆಳೆಯುತ್ತದೆ. ಇದರ ಮೇಲ್ವಿಚಾರಣೆಯನ್ನು ಶಾಲಾ ಶಿಕ್ಷಕರು ಹಾಗೂ ಮುಖ್ಯಸ್ಥರು ಮಾಡಬೇಕು.

***ನಿಸರ್ಗ ಮತ್ತು ಪರಿಸರ :*** ಪ್ರಕೃತಿಯನ್ನು ಮಗುವು ಪ್ರತಿನಿತ್ಯ ನೋಡಿದರೂ ಅದರ ಅಧ್ಯಯನ ಮಾಡಿಲ್ಲ. ನಿಬಿಡವಾಗಿ ಬೆಳೆದಿರುವ ಸಸ್ಯರಾಸಿ. ಆಕಾಶವನ್ನು ಭೇದಿಸುವಂತೆ ಶಿರವನ್ನು ಚಾಚಿ ನಿಂತಿರುವ ಪರ್ವತಶ್ರೇಣಿಗಳು. ನಿರಂತರವಾಗಿ ಹರಿಯುವ ನದಿಗಳು, ದೈವನಿರ್ಮಿತ ಪರಿಸರ. "ಇದನ್ನು ಮಾನವ ಸೂರೆಮಾಡಿದರೆ ಮಾನವನಿಗೆ ತಪ್ಪದು ವಿಪತ್ತು" ಎನ್ನುವುದನ್ನು ಮಕ್ಕಳಿಗೆ ತಿಳಿಸಬೇಕು. ಶಾಲೆಗಳ ಆವರಣದಲ್ಲಿ ಹಾಗೂ ಅವರ ಮನೆಗಳ ಮುಂಭಾಗದಲ್ಲಿ ತೆಂಗು ಮುಂತಾದ ಸಸಿಗಳನ್ನು ನೆಟ್ಟು ಬೆಳೆಸಬೇಕು. ಶಾಲೆಗಳನ್ನು ಶಿಕ್ಷಕರು ಹಾಗೂ ಮನೆಗಳಲ್ಲಿ ತಂದೆ ತಾಯಿಗಳು ಮಕ್ಕಳು ಮಾಡುವ ಕೆಲಸದ ಬಗ್ಗೆ ಗಮನ ಹರಿಸಿ ಮೇಲ್ವಿಚಾರಣೆ ಮಾಡಿ ಅವರು ಸಸಿಗಳನ್ನು ನೆಡುವಂತೆ ಮಾಡಬೇಕು. ಇದರಿಂದ ಪ್ರಕೃತಿಯ ಆರಾಧನಾ ಪ್ರವೃತ್ತಿ ಮಕ್ಕಳಲ್ಲಿ ಬೆಳೆದು ವನಸಂಪತ್ತನ್ನು ಬೆಳೆಸಿ ಪರಿಸರದ ಮಾಲಿನ್ಯವನ್ನು ತಡೆಗಟ್ಟಿದಂತಾಗುತ್ತದೆ. ಆದ್ದರಿಂದ ಸಸ್ಯಗಳ್ನು ಬೆಳೆಸುವ ಪ್ರವೃತ್ತಿ ಮಕ್ಕಳಲ್ಲಿ ಬೆಳೆಯುವಂತೆ ಮಾಡಬೇಕು. ಇದರ ಮೇಲ್ವಿಚಾರಣೆಯನ್ನು ಶಿಕ್ಷಕರು ಹಾಗೂ ತಂದೆ ತಾಯಿಗಳು ಮಾಡಬೇಕು.

***ಪ್ರಜಾಪ್ರಭುತ್ವ, ಪೌರತ್ವ, ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಭಾವೈಕ್ಯತೆ :*** ಪ್ರಜಾಪ್ರಭುತ್ವ, ಪ್ರಜೆಗಳಿಂದ ಪ್ರಜೆಗಳಿಗಾಗಿ ನಿರ್ಮಿತವಾದ ಸರ್ಕಾರವಾಗಿದೆ. ಪ್ರಜೆಗಳೆಲ್ಲ ವಿದ್ಯಾವಂತರಾದರೆ ಪ್ರಜಾಪ್ರಭುತ್ವ ಯಶಸ್ವಿಯಾಗುತ್ತದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ನ್ಯಾಯವನ್ನು ಪ್ರಜೆಗಳಿಗೆ ದೊರಕಿಸುವುದೇ ಪ್ರಜಾಪ್ರಭುತ್ವದ ಉದ್ದೇಶ. ಆಧುನಿಕ ಇತಿಹಾಸದ ಸಾಮಾಜಿಕ ಬದಲಾವಣೆಯ ಈ ಶತಕದಲ್ಲಿ ನಾವು ವಾಸಿಸುತ್ತಿದ್ದೇವೆ. ನಾವು ಗಮನಿಸದೇ ಇರಲಿ, ನಾವು ಸ್ವಾಗತಿಸಲಿ ಅಥವಾ ಸ್ವಾಗತಿಸದೆ ಇರಲಿ. ಇದು ಗಮನಾರ್ಹವಾದ ಪರ್ವಕಾಲವಾಗಿದೆ. ಭಾರತದ ಪ್ರಜಾಪ್ರಭುತ್ವ ಸಾಮಾನ್ಯ ವ್ಯಕ್ತಿಯ ಕೈಯಲ್ಲಿದೆ. ಅವನಿಗೆ ರಾಷ್ಟ್ರದ ಆಡಳಿತವನ್ನು ನಡೆಸುವ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಮಸ್ಯೆಗಳನ್ನು ಅರಿಯುವ ಜ್ಞಾನ ಹಾಗೂ ಆಡಳಿತಾತ್ಮಕ ಕೌಶಲಬೇಕು. ತನ್ನ ಹಿತವನ್ನು ತ್ಯಾಗಮಾಡಿ ನಾಗರೀಕತೆಯ ಬೆಳವಣಿಗೆ ಹಾಗೂ ರಾಷ್ಟ್ರದ ಕಲ್ಯಾಣಕ್ಕೆ ತನ್ನನ್ನು ತಾನೆ ಸಮರ್ಪಿಸಿಕೊಳ್ಳಬೇಕು. ಪ್ರಜಾಪ್ರಭುತ್ವದ ಶೀಲ ಹಾಗೂ ಘನತೆಯನ್ನು ಮಕ್ಕಳು ಅರಿಯುವಂತೆ ಶಿಕ್ಷಕರು ಮಾಡಬೇಕು. ಶಾಲಾ ಸರ್ಕಾರದ ರಚನೆ ಹಾಗೂ ಅದರ ಧ್ಯೇಯೋದ್ದೇಶಗಳನ್ನು ರೂಪಿಸುವಲ್ಲಿ ಶಿಕ್ಷಕರ ಕೊಡಿಗೆ ಮಹತ್ವದ್ದು.

***ಪೌರತ್ವ :*** ನಾಗರೀಕರಿಗೆ ದೊರೆತ ಶಿಕ್ಷಣದ ಆಧಾರದ ಮೇಲೆ ಪೌರತ್ವ ನಿಂತಿದೆ. ಇದರ ಆಧಾರದ ಮೇಲೆ ಪ್ರಜಾಪ್ರಭುತ್ವ ನಿಂತಿದೆ. ಪೌರತ್ವ ಪ್ರಜಾಪ್ರಭುತ್ವದ ಅವಿಭಾಜ್ಯ ಅಂಗ. ಆದ್ದರಿಂದ ಇದನ್ನು ಮಕ್ಕಳು ಅರಿಯುವಂತೆ ಮಾಡಬೇಕು. ಇದರ ಕಡೆ ಶಿಕ್ಷಕರು ಗಮನ ಹರಿಸಬೇಕು.

***ರಾಷ್ಟ್ರೀಯ ಭಾವೈಕ್ಯತೆ :*** ರಾಷ್ಟ್ರೀಯ ಭಾವೈಕ್ಯತೆ ಪ್ರಜಾಪ್ರಭುತ್ವದಲ್ಲಿ ಬಹಳ ಪ್ರಮುಖವಾದದ್ದು. ಕ್ಷುಲ್ಲಕ ವಿಷಯಗಳಿಗಾಗಿ ಹೋರಾಟ ನಡೆಯುತ್ತಿರುವುದನ್ನು ನೋಡುತ್ತಿದ್ದೇವೆ. ಪ್ರಾಂತೀಯ ಭಾವನೆಗಳು ರಾಷ್ಟ್ರೀಯ ಭಾವನೆಗಳಿಗೆ ಅಡ್ಡಿಯಾಗಬಾರದು. ದೇಶಾಭಿಮಾನ ಬೆಳೆಯುವಂತೆ ಮಾಡಲು ಶಾಲೆಗಳಲ್ಲಿ ರಾಷ್ಟ್ರೀಯ ಧರ್ಮ, ಸ್ವಾತಂತ್ರ್ಯಕ್ಕೆ ಹೋರಾಡಿದ ಹೋರಾಟಗಾರರ ಕಥೆಗಳನ್ನು ಹೇಳಬೇಕು. ಶಿಕ್ಷಕರು ಎಚ್ಚರಿಕೆ ವಹಿಸಬೇಕು. ಮುಖ್ಯೋಪಾಧ್ಯಾಯರು ಎಚ್ಚರಿಕೆ ವಹಿಸಿ ರಾಷ್ಟ್ರೀಯ ಭಾವನೆ ಮಕ್ಕಳಲ್ಲಿ ವೃದ್ಧಿಗೊಳ್ಳುವಂತೆ ನೋಡಿಕೊಳ್ಳಬೇಕು. ರಾಜಕೀಯ, ಆರ್ಥಿಕ ಭಾಷಿಕ, ಪ್ರಾಂತೀಯ, ಧಾರ್ಮಿಕ ಹಾಗೂ ಸಾಮಾಜಿಕ ಭಿನ್ನತೆಗಳ್ನು ಮರೆತು ನಾವೆಲ್ಲರೂ ಭಾರತೀಯರೆಂದು ಮಕ್ಕಳು ಭಾವಿಸುವಂತೆ ಮಾಡಬೇಕು. ರಾಷ್ಟ್ರಗೀತೆ, ರಾಷ್ಟ್ರಧ್ವಜಗಳ ಬಗ್ಗೆ ಮಕ್ಕಳು ಗೌರವಹೊಂದುವಂತೆ ಹಾಗೂ ರಾಷ್ಟ್ರಭಾಷೆಯನ್ನು ಮಕ್ಕಳು ಕಲಿಯುವಂತೆ ಮಾಡಬೇಕು.

ಹಾಗೆಯೇ ಅಂತರರಾಷ್ಟ್ರೀಯ ಭಾವನೆ ಬೆಳೆಸಬೇಕು. ವೈಜ್ಞಾನಿಕ ಸಂಶೋಧನೆಯಿಂದ ಭೌಗೋಳಿಕ ಸೀಮೋಲ್ಲಂಘನೆ ಮಾಡಿ ಇಡೀ ಜಗತ್ತನ್ನೇ ಒಂದು ಕುಟುಂಬವನ್ನಾಗಿ ಪರಿವರ್ತಿಸಿರುವಾಗ ಒಂದು ರಾಷ್ಟ್ರದ ನೆರವಿನಿಂದ ಮತ್ತೊಂದು ರಾಷ್ಟ್ರ ತನ್ನ ಪ್ರಗತಿಯನ್ನು ಸಾಧಿಸುತ್ತಿರುವಾಗ, ನಾವು ಪಡೆಯುವ ಜ್ಞಾನಕ್ಕೆ ಅಂತರಕ್ಷಾಮ ಬಂದರೆ ಅಥವಾ ಯಾವುದಾದರೂ ಸಂಶೋಧನೆ ನಡೆದಾಗ ಅದರ ಫಲವನ್ನು ಇಡೀ ಜಗತ್ತೇ ಅನುಭವಿಸುವಾಗ, ರಾಷ್ಟ್ರೀಯ ಭಾವನೆಗೆ ಅಡ್ಡಿಯಾಗದಂತೆ ಅಂತರರಾಷ್ಟ್ರೀಯ ಭಾವನೆಯನ್ನು ಮಕ್ಕಳು ಬೆಳೆಸಿಕೊಂಡು ವಿಶ್ವಮಾನವರಾಗುವಂತೆ ಮಾಡಬೇಕು. ಆಗಾಗ್ಗೆ ಮಕ್ಕಳಲ್ಲಿ ಈ ಭಾವನೆಗಳು ಬೆಳೆದಿವೆಯೆ ಅಥವಾ ಇಲ್ಲವೇ; ಇಲ್ಲದಿದ್ದರೆ ಕಾರಣವೇನು ಎಂಬುದನ್ನು ಸಮೀಕ್ಷೆ ಮಾಡಿ ಈ ಭಾವನೆಗಳು ಅವರಲ್ಲಿ ಬೆಳೆಯುವಂತೆ ಮಾಡಬೇಕು.

***ಪ್ರಸಾರ ಮಾಧ್ಯಮಗಳು :*** ಪ್ರಸಾರ ಕ್ಷೇತ್ರದಲ್ಲಿ ಆದರ್ಶಸ್ವರೂಪದ ಬೆಳವಣಿಗೆ ಆಧುನಿಕಯುಗದಲ್ಲಿ ಬೆಳೆದಿದೆ. ಪತ್ರಿಕೆಗಳು, ಚಲನಚಿತ್ರಗಳು. ಆಕಾಶವಾಣಿ, ದೂರದರ್ಶನ ಜನತೆಯ ಮೇಲೆ ಹೆಚ್ಚಿನ ಪ್ರಭಾವಬೀರುವ ಮಾಧ್ಯಮಗಳಾಗಿವೆ. ಆದ್ದರಿಂದ ಶಿಕ್ಷಣಕ್ಷೇತ್ರ ಹಾಗೂ ಪ್ರಸಾರ ಕ್ಷೇತ್ರ ಇವುಗಳಲ್ಲಿ ನಿಕಟವಾದ ಸಂಬಂಧ ಬೆಳೆಯಬೇಕು. ಅಹಿತಕರ ಸನ್ನಿವೇಶದಲ್ಲಿ ಬೆಳೆಯುವ ಮಕ್ಕಳಿಗೆ ಪ್ರಸಾರ ಮಾಧ್ಯಮಗಳ ಮೂಲಕ ಶಿಕ್ಷಣ ಪ್ರಸಾರವಾಗಬೇಕು.

ಚಲನಚಿತ್ರಗಳು ಶಿಕ್ಷಣ ಪ್ರಸಾರದ ಪ್ರಬಲವಾದ ಹಾಗೂ ಫಲಕಾರಿ ಮಾಧ್ಯಮ. ಚಲನಚಿತ್ರಗಳು ದೃಶ್ಯ ಹಾಗೂ ಧ್ವನಿಗಳು ಜ್ಞಾನೇಂದ್ರಿಯಗಳ ಮೂಲಕ ಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನು ಉಂಟುಮಾಡುತ್ತವೆ. ಶಿಕ್ಷಣ, ಆರೋಗ್ಯ, ವಿನೋದ, ಹರ್ಷೋಲ್ಲಾಸ, ಹಾಸ್ಯಗಳ ಜೊತೆಯಲ್ಲಿ ಶಿಕ್ಷಣ ಪ್ರಸಾರವಾಗುವುದನ್ನು ಮಗು ಗಮನಿಸುವುದರಿಂದ ಅದಕ್ಕೆ ಶಿಕ್ಷಣ ದೊರಕಿದಂತಾಗುತ್ತದೆ.

ಆದರೆ ದುಷ್ಕೃತ್ಯ, ದೌರ್ಜನ್ಯ, ಹಿಂಸೆ, ಲೈಂಗಿಕ ಹಾಗೂ ಭಯೋತ್ಪಾದಕ ದೃಶ್ಯಗಳನ್ನು ಮಕ್ಕಳಿಗೆ ತೋರಿಸಬಾರದು. ತಾಯಿಯಂದಿರು, ಶಿಕ್ಷಕರು ಇದರ ಬಗ್ಗೆ ಗಮನ ಹರಿಸಿ ಮಕ್ಕಳು ಇಂತಹ ಚಿತ್ರಗಳಿಂದ ದೂರವಿರುವಂತೆ ಮುನ್ನೆಚ್ಚರಿಕೆ ವಹಿಸಬೇಕು.

***ಆಟ :*** ಮನಶಾಸ್ತ್ರದ ಪ್ರಕಾರ ಆಟ ಮಗುವಿನ ವ್ಯಕ್ತಿತ್ವದ ಅವಿಭಾಜ್ಯ ಅಂಗ. ಒಬ್ಬ ಕವಿ ಕವನ ಬರೆಯದೆ ಹೇಗೆ ಇರಲು ಸಾಧ್ಯವಿಲ್ಲವೋ, ಒಬ್ಬ ಸಂಗೀತಗಾರ ಹಾಡನ್ನು ಹಾಡದೆ ಹೇಗೆ ಇರಲು ಸಾಧ್ಯವಿಲ್ಲವೋ: ಹಾಗೆಯೇ ಮಗುವೂ ಆಟವಿಲ್ಲದೆ ಇರಲು ಸಾಧ್ಯವಿಲ್ಲ. ಆಧುವಿಕ ಯುಗದಲ್ಲಿ ಆಟಕ್ಕೆ ಪ್ರಧಾನಸ್ಥಾನ ಕೊಡಲಾಗಿದೆ. ಆಡುವ ಮಗುವಿನ ಸೃಜನಾತ್ಮಕ ಚಟುವಟಿಕೆಗಳ ಸಂಕೇತ. ಮಗುವು ಸಂತೋಷದಿಂದ ಆಟವಾಡುತ್ತದೆ. ಜಾತಿ, ಪಂಗಡ, ಅಂತಸ್ತು ವಯಸ್ಸು, ಬಡವ, ಬಲ್ಲಿದ, ಬಣ್ಣ, ಅಧಿಕಾರ, ಸಂಪ್ರದಾಯ ಇವುಗಳನ್ನೆಲ್ಲ ಮರೆತು ಮಕ್ಕಳು ಸಂತೋಷದಿಂದ ಆಡುತ್ತವೆ. ಬೌದ್ಧಿಕ ಹಾಗೂ

ಭಾವನಾತ್ಮಕ ಬುದ್ಧಿ ಬೆಳೆಯುತ್ತದೆ. ಇದರಿಂದ ಜಾತ್ಯಾತೀತ ಮನೋಭಾವನೆ, ರಾಷ್ಟ್ರೀಯ ಭಾವೈಕ್ಯತೆ, ಸಮಾನತೆ, ಸ್ವಾತಂತ್ರ್ಯ – ಇವುಗಳು ಬೆಳೆದಂತಾಗುತ್ತದೆ. ಆದ್ದರಿಂದ ಶಿಕ್ಷಕರು ಹಾಗೂ ತಂದೆ ತಾಯಿಗಳು ಎಚ್ಚರಿಕೆ ವಹಿಸಿ ನಿಗದಿತ ವೇಳೆಯಲ್ಲಿ ಮಕ್ಕಳಿಗೆ ಆಟವಾಡಲು ಅವಕಾಶ ಕೊಡಬೇಕು. ಆಟವಾಡುವುದರಿಂದ ದುಷ್ಕೃತ್ಯಗಳ ಕಡೆ ಅವರ ಮನಸ್ಸು ಹರಿಯುವುದಿಲ್ಲ ಹಾಗೂ ಅವರು ರೋಗರುಜಿನಗಳಿಗೆ ತುತ್ತಾಗದೆ ದೈಹಿಕ ಹಾಗೂ ಮಾನಸಿಕ ಆರೋಗ್ಯವನ್ನು ಕಾಪಾಡಿಕೊಂಡಂತಾಗುತ್ತದೆ.

ಅಷ್ಟೇ ಅಲ್ಲದೆ ಆಟದ ಮೂಲಕ ಸಣ್ಣಮಕ್ಕಳಿಗೆ ಪಾಠ ಹೇಳಿಕೊಡುವುದರಿಂದ ಮಕ್ಕಳು ಸುಲಭವಾಗಿ ಪಾಠ ಕಲಿಯುತ್ತವೆ. ಆದ್ದರಿಂದ ಆಟದ ಮೂಲಕ ಪಾಠ ಹೇಳಿಕೊಡುವುದನ್ನು ಶಿಕ್ಷಕ ಸಮುದಾಯ ಅನುಷ್ಠಾನಕ್ಕೆ ತರಲು ಮುನ್ನೆಚ್ಚರಿಕೆ ವಹಿಸಿ ಅದರ ಪರಿಣಾಮವನ್ನು ಅರಿಯಬೇಕು. ಎಲ್ಲಾ ಮಕ್ಕಳು ಆಟಗಳಲ್ಲಿ ಭಾಗವಹಿಸುತ್ತಿದ್ದಾರೆಯೆ ಅಥವಾ ಇಲ್ಲವೆ ಎಂಬುದರ ಬಗ್ಗೆ ಶಿಕ್ಷಕರು ಮೇಲ್ವಿಚಾರಣೆ ನಡೆಸಬೇಕು. ಚೀನೀಯರ ಒಂದು ಗಾದೆಯ ಪ್ರಕಾರ ಒಂದು ವರ್ಷದ ಬೆಳೆ ಬೇಕಾದರೆ ಧಾನ್ಯ ಬೀಜಗಳನ್ನು ಬಿತ್ತಬೇಕು. ನೂರು ವರ್ಷದ ಬೆಳೆ ಬೇಕಾದರೆ ಹಣ್ಣಿನ ಬೀಜವ ಬಿತ್ತಬೇಕು. ಸಾವಿರ ವರ್ಷದ ಬೆಳೆ ಬೇಕಾದರೆ ವಿದ್ಯೆಯ ಬೀಜವ ಬಿತ್ತಬೇಕು. ಆದ್ದರಿಂದ ಮಗುವು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ನೈತಿಕವಾಗಿ, ರಾಜಕೀಯವಾಗಿ ಬೆಳೆಯಬೇಕಾದರೆ, ಪೂರ್ವ ಪ್ರಾರ್ಥಮಿಕ ಹಾಗೂ ಪ್ರಾಥಮಿಕ ಶಿಕ್ಷಣ ಅತ್ಯಾವಶ್ಯಕವಾಗಿ ಮಕ್ಕಳಿಗೆ ದೊರಕುವಂತೆ ಮಾಡುವುದು ತಂದೆ ತಾಯಿಗಳ ಹಾಗೂ ಶಿಕ್ಷಕರ ಆದ್ಯಕರ್ತವ್ಯ.

*ಶಿಸ್ತು :* ಆದರ್ಶಭಾವನೆಗಳು ಬೆಳೆದಾಗ ಮಕ್ಕಳಲ್ಲಿ ನಿರೀಕ್ಷಿತ ನಡತೆ ಕಾಣುವುದು, ತನ್ನ ಆದರ್ಶಕತೆಯಿಂದ ಮಗುವು ಶಾಲೆಯನ್ನು ಬೆಳಗಬೇಕು. ಆದ್ದರಿಂದ ರಾಷ್ಟ್ರದ ಅಭ್ಯುದಯಕ್ಕೆ, ಸಮಾಜದ ಪರಿಪಕ್ವತೆಗೆ, ಮಕ್ಕಳಲ್ಲಿ ಶಿಸ್ತು ಬೆಳೆಯಬೇಕು. ಅಶಿಸ್ತಿನಿಂದ ಕೂಡಿರುವ ರಾಷ್ಟ್ರ ಅನಾಗರೀಕ ರಾಷ್ಟ್ರವಾಗುತ್ತದೆ. ಕ್ರೂರ ದೇಹದಂಡನೆ ಮಗುವಿನ ವ್ಯಕ್ತಿತ್ವವನ್ನು ಹಾಳುಮಾಡುತ್ತದೆ. ಮಕ್ಕಳು ಕ್ರಮೇಣ ಎದುರಾಗುತ್ತವೆ; ಅವರು ಸಮಾಜಕ್ಕೆ ಕಂಟಕಪ್ರಾಯರಾಗುತ್ತಾರೆ. ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಗೆ ಸ್ವಾತಂತ್ರ್ಯವನ್ನು ಕೊಡಬೇಕು. ಇಲ್ಲದಿದ್ದರೆ ಅವರು ಸಮಸ್ಯೆಯ ಮಕ್ಕಳಾಗುತ್ತಾರೆ. ಅವರಲ್ಲಿ ಶಿಸ್ತನ್ನು ಬೆಳೆಸಬೇಕು. ಅವರನ್ನು ಬದಲಿಸಲು ಪ್ರೀತಿ ವಿಶ್ವಾಸ ಹಾಗೂ ಮಾರ್ಗದರ್ಶನ ಆವಶ್ಯಕ. ದೇಹದಂಡನೆಗೆ ಈಗ ಅವಕಾಶವಿಲ್ಲ. ಆದ್ದರಿಂದ ಮಕ್ಕಳು ತಪ್ಪು ಮಾಡಿದಲ್ಲಿ ಸೌಮ್ಯಶಿಕ್ಷೆ ಹಾಗೂ ವಾತ್ಸಲ್ಯ ಇವೆರಡನ್ನು ಶಿಕ್ಷಕರು ಹಾಗೂ ತಂದೆ ತಾಯಿಗಳು ಮುನ್ನೆಚ್ಚರಿಕೆ ವಹಿಸಿ ಆಚರಣೆಗೆ ತರುವುದು ಉತ್ತಮ.

*ಶಿಕ್ಷಕರಿಗೆ ತರಬೇತಿ :* ಸೇವಾಪೂರ್ವ ತರಬೇತಿಯಷ್ಟೇ ಸೇವಾವಧಿ ತರಬೇತಿಯೂ ಬಹಳ ಪ್ರಧಾನವಾದದ್ದು. ಸೇವಾ ಕಾಲದಲ್ಲಿ ಪಡೆದ ಅನುಭವದ ವೃದ್ಧಿಗೆ ಹಾಗೂ ತನಗೆ ಕಂಡು ಬಂದ ಅನುಮಾನಗಳ ನಿವಾರಣೆಗೆ ಹಾಗೂ ಪರಿಹಾರಕ್ಕೆ ಸೇವಾವಧಿ ತರಬೇತಿ ಅತ್ಯಾವಶ್ಯಕವಾಗಿದೆ. ಅಷ್ಟೇ ಅಲ್ಲದೆ ಹೊಸ ಬೋಧನಾ ವಿಧಾನ, ಪಾಠೋಪಕರಣಗಳ ಸಮಯೋಚಿತ ಉಪಯೋಗದ ಅವಶ್ಯಕತೆ, ಹೊಸ ಹೊಸ ಬೋಧನಾ ವಿಧಾನಗಳ ದೃಢೀಕರಣ ಮುಂತಾದವುಗಳ ಅನುಭವ ಶಿಕ್ಷಕರ ವರ್ಗಕ್ಕೆ ಆಗಬೇಕಾಗಿದೆ. ಆದ್ದರಿಂದ ಶಿಕ್ಷಣ ಇಲಾಖೆ ತರಬೇತಿಗೆ ವ್ಯವಸ್ಥೆ ಮಾಡಬೇಕು. ಶಾಲಾ ಸಮುದಾಯದ ಮೂಲಕವೂ ಶಿಕ್ಷಣದ ವ್ಯವಸ್ಥೆಯಾಗಬೇಕು. ಇದರ ಮೇಲ್ವಿಚಾರಣೆಯನ್ನು ಶಾಲಾಮುಖ್ಯಸ್ಥರು ಹಾಗೂ ಇಲಾಖೆಯ ಅಧಿಕಾರಿಗಳು ಮಾಡಬೇಕು ಹಾಗೂ ಯಶಸ್ವಿಗೊಳಿಸಬೇಕು.

*ಮುಖ್ಯೋಪಾಧ್ಯಾಯರ ಕರ್ತವ್ಯ ಮತ್ತು ಮೇಲ್ವಿಚಾರಣೆ :* ಶಾಲೆಯ ಮುಖ್ಯೋಪಾಧ್ಯಾಯರು ಶಾಲೆಯ ಶಿಸ್ತನ್ನು ಕಾಪಾಡುವವರೂ ಶಾಲೆಯ ಪಾಲಕರೂ ಹಾಗೂ ಶಾಲೆಯ ಮಾರ್ಗದರ್ಶಕರೂ ಆಗಿರಬೇಕು. ಪಠ್ಯಕ್ರಮ, ಪಾಠಗಳ ಹಾಗೂ ಸಹಪಠ್ಯ ಚಟುವಟಿಕೆಗಳ ಪ್ರಗತಿಯನ್ನು ವೀಕ್ಷಿಸಬೇಕು. ಪ್ರತಿ ಮಗುವಿಗೂ ಕನಿಕರ, ಪ್ರೀತಿ, ವಿಶ್ವಾಸ ಹಾಗೂ ಶಿಸ್ತಿನ ಅಮೃತವನ್ನು ಕುಡಿಸಬೇಕು. ಅವರು ತಮ್ಮ ಆದರ್ಶ ವ್ಯಕ್ತಿತ್ವದಿಂದ ಬೇರೆಯರವನ್ನು ಆಕರ್ಷಿಸುವಂತಿರಬೇಕು. ಶಾಲೆಯ ಎಲ್ಲಾ ಕಾರ್ಯಕ್ರಮಗಳು ಇವರ ನೇತೃತ್ವದಲ್ಲಿಯೇ ನಡೆಯಬೇಕು. ಮುಖ್ಯೋಪಾಧ್ಯಾಯರು ಸೌರವ್ಯೂಹದ ಸೂರ್ಯನಂತೆ. ಇತರೇ ಶಿಕ್ಷಕರು ಸೂರ್ಯನ ಸುತ್ತಲೂ ಸುತ್ತುವ ಗ್ರಹಗಳಂತೆ. ಮುಖ್ಯೋಪಾಧ್ಯಾಯರು ಶಾಲಾ ಆಡಳಿತದ ಅಡಿಗಲ್ಲು. ಅವರು ಶಾಲೆಯ ಆಡಳಿತಾಧಿ ಕಾರಿಗಳು, ಶೈಕ್ಷಣಿಕ ತಜ್ಞರು, ಶಾಲಾ ಚಟುವಟಿಕೆಗಳ, ಮಕ್ಕಳ ಕಲಿಕೆಯ ಮೇಲ್ವಿಚಾರಕರು ಹಾಗೂ ಸಮಾಜದ ಸಮನ್ವಯಾಧಿಕಾರಿಗಳು ಆಗಿರಬೇಕು.

*(ಮುಂದುವರಿಯುತ್ತದೆ.)*





# ಕಾಯಕವೇ ಕೈಲಾಸ ಎಲ್ಲಿದೆ?

*ಇಂಗ್ಲೀಷ್ ಮೂಲ : ಜಿ.ಎಸ್. ಮಹಗೊಯಾಂಕರ್*
*ಅನುವಾದ : ಕೆ.ಎಚ್. ಶಿವರುದ್ರಯ್ಯ*
*ಮುಖ್ಯೋಪಾಧ್ಯರು, ನಿವೇದಿತಾ ಪ್ರೌಢಶಾಲೆ*
*ಶ್ರೀ ಸಿದ್ಧಗಂಗಾ ಶಾಖೆ ಕ್ಯಾತಸಂದ್ರ, ತುಮಕೂರು ತಾಲ್ಲೂಕು.*

ಹನ್ನೆರಡನೇ ಶತಮಾನದಲ್ಲಿ ಶಿವಶರಣರು 'ಕಾಯಕ' ಮತ್ತು 'ಜೀವನ'ದ ಬಗ್ಗೆ ಹೊಸ ಪರಿಕಲ್ಪನೆಯನ್ನು ರೂಪಿಸಿದರು. ಅವರಲ್ಲಿ ಸಾಮಾನ್ಯ ಜನರ ಜೀವನ ಶೈಲಿಯ ಬಗ್ಗೆ ಹೊಸ ಪರಿಕಲ್ಪನೆಗಳು ಮತ್ತು ಒಮ್ಮತವುಳ್ಳ ಅಭಿಪ್ರಾಯಗಳು ಮೂಡಿಬಂದವು. ಅವುಗಳಲ್ಲಿ 'ಕಾಯಕವೇ ಕೈಲಾಸ' ಎಂಬ ತತ್ತ್ವ ಜನರನ್ನು ಆಕರ್ಷಿಸಿತು. 'ಕಾಯಕ' ಎಂದರೆ ವೃತ್ತಿ ದುಡಿಮೆ, ಉದ್ಯೋಗ, ಒಟ್ಟಾರೆ ದೇಹವನ್ನು ದಂಡಿಸಿ ತಮ್ಮ ಅನ್ನವನ್ನು ತಾವೇ ಸಂಪಾದಿಸುವುದು ಬಸವಣ್ಣ ಮತ್ತು ಅನೇಕ ಶರಣರು ಕಾಯಕ ಸಿದ್ಧಾಂತವನ್ನು ಅನುಷ್ಠಾನ ಮಾಡಿ ತೋರಿಸಿದರು. ಮತ್ತೊಬ್ಬರ ಮೇಲೆ ಅವಲಂಬಿಸುವುದನ್ನು ದುಡಿಯದೇ ತಿನ್ನುವುದನ್ನು ವಿರೋಧಿಸಿದರು. ಕಾಯಕದಿಂದ ಕೈಲಾಸವಲ್ಲ ಕಾಯಕವೇ ಕೈಲಾಸ ಎಂಬ ಹೊಸಕಲ್ಪನೆಯನ್ನು ಜನಮನದಲ್ಲಿ ಬಿತ್ತಿದರು. ಜನಜಾಗೃತಿಯುಂಟಾಗುವಂತೆ ಮಾಡಿದರು.

೧೨ನೇ ಶತಮಾನದಲ್ಲಿ ಶರಣರು ಸಮಾಜವನ್ನು ಜೀವನದ ಒಂದು ಪ್ರಯೋಗಶಾಲೆಯನ್ನಾಗಿ ಮಾರ್ಪಾಡು ಮಾಡಿದರು. ಅವರು ನಂಬಿದ ಸಿದ್ಧಾಂತಗಳು ಮತ್ತು ಆದರ್ಶಗಳನ್ನು ಆಚರಣೆಗೆ ತಂದರು. ಜೊತೆಗೆ ಅವರೂ ಅಗ್ನಿ ಪರೀಕ್ಷೆಗೆ ಒಳಗಾದರು. ಅಲೆಗಳ ವಿರುದ್ಧ ಹೋರಾಡಿದರು. ವಚನ ಸಾಹಿತ್ಯದ ಮೂಲಕ ಜನರಲ್ಲಿ ಅರಿವನ್ನುಂಟುಮಾಡಿದರು. 'ಶರಣ ಚಳುವಳಿ'ಯ ಮೂಲಕ ಜನರಲ್ಲಿ ವಿಚಾರ ಕ್ರಾಂತಿ ಮೂಡಿಸಿದರು. ನುಡಿದಂತೆ ನಡೆದರು. ಕಾಯಕದ ಮತ್ತೊಂದು ಮುಖ ''ದಾಸೋಹ''. ಎಲ್ಲರನ್ನು ಸರಿಸಮಾನವಾಗಿ ನೋಡುವುದು. ಬಸಣ್ಣನವರು ತಮ್ಮ ಒಂದು ವಚನದಲ್ಲಿ ಹೀಗೆ ಬಣ್ಣಿಸಿದ್ದಾರೆ ''ಬೇಡುವರಿಲ್ಲದೇ ಬಡವನಾದೆನಯ್ಯ'' ಎಂದು ಕಾಯಕ ಮತ್ತು ದಾಸೋಹಕ್ಕೆ ಕಿಂಚಿತ್ತೂ ಲೋಪ ಬರದ ಹಾಗೆ ನೋಡಿಕೊಂಡರು. ಸೋಮಾರಿತನ, ನಿರುದ್ಯೋಗ ಅಸಮಾನತೆ ಬಸವಣ್ಣನವರು ರೂಪಿಸಿದ ಸಮಾಜದಲ್ಲಿರಲಿಲ್ಲ. ಸಂತೃಪ್ತಿ ಮತ್ತು ಸದ್ಭಾವನೆ ಸಮಾಜದಲ್ಲಿ ನೆಲೆ ಮೂಡಿತ್ತು.

'ದುಡಿಮೆಯೇಧರ್ಮ' ಎಂಬ ಲೇಖನವನ್ನು ಹಿರಿಯ ಜಾನಪದ ವಿದ್ವಾಂಸರಾದ ಶ್ರೀ ಗೊ.ರು. ಚನ್ನಬಸಪ್ಪನವರು 'ಸಿದ್ಧಗಂಗಾ ಮಾಸಿಕ'ದಲ್ಲಿ ಪ್ರಕಟಿಸಿದ ಅಭಿಪ್ರಾಯವನ್ನು ಇಲ್ಲಿ ಉಲ್ಲೇಖಿಸಬಹುದು. ಅದು ವಾಸ್ತವಿಕತೆಗೆ ಹಿಡಿದ ಕನ್ನಡಿಯಾಗಿದೆ. ''ಭಾರತದಂತಹ ನಿಸರ್ಗ ಸಂಪತ್ತಿನ ದೇಶ ಇನ್ನೂ ಬಡತನವನ್ನು ಅನುಭವಿಸುತ್ತಿದೆ ಎಂದರೆ ಅದಕ್ಕೆ ಕಾರಣ ಸೋಮಾರಿಗಳ ಸಂಖ್ಯೆ ಹೆಚ್ಚಿರುವುದು. ನಮ್ಮ ದೇಶದಲ್ಲಿ ಎಲ್ಲವೂ ಇದೆ, ಆಗ ಬೇಕಾಗಿರುವ 'ದುಡಿಮೆಯೇ ಧರ್ಮವೆಂದ'' ಈ ಧರ್ಮ ಆಚರಣೆಗೆ ಬರದಿದ್ದರೆ ನೆಮ್ಮದಿ ಇಲ್ಲ''.

ಆಗಾಗ್ಯೂ ೨೦ನೇ ಶತಮಾನದಲ್ಲಿ ದುಡಿಮೆಯ ಮೌಲ್ಯವನ್ನು ಜನಮನದಲ್ಲಿ ಬಿತ್ತಲು ಅನೇಕ ಮಠಾಧಿಪತಿಗಳು ದಾರ್ಶನಿಕರು ಸಂತರು, ಸಾಹಿತಿಗಳು, ಸಮಾಜಚಿಂತಕರು ಧಾರ್ಮಿಕ, ರಾಜಕೀಯ ಮುಖಂಡರು ಬಹುದೊಡ್ಡ ಪ್ರಯತ್ನವನ್ನು ಮಾಡಿರುತ್ತಾರೆ. ಅವರ ಶ್ರಮವನ್ನು ಪರಿಗಣಿಸಿದರೆ ತೃಪ್ತಿಕರವಾದ ಫಲಿತಾಂಶ ಕಂಡುಬರದಿರುವುದು ಶೋಚನೀಯ. ಅವರ ಅನಿಸಿಕೆಯನ್ನು ಗಮನಿಸಿದರೆ ನಮ್ಮ ಸಮಾಜ ಎತ್ತ ಕಡೆಗೆ ಕೊಚ್ಚಿಕೊಂಡು ಹೋಗುತ್ತಿದೆ ಎಂದು ಭಯಭೀತರಾಗಿದ್ದರೆ.

ಈ ಸಂದರ್ಭದಲ್ಲಿ ಪಾಶ್ಚಿಮಾತ್ಯ ಸಮಾಜದ ಚಿತ್ರಣವನ್ನು ಅವಲೋಕಿಸುವುದಾದರೆ ಅದು ಹೆಚ್ಚು ಅಭಿವೃದ್ಧಿ ಹೊಂದಿ ಆಧುನಿಕವಾಗಿದೆ. ಅದಕ್ಕೆ ಕಾರಣ ಕೈಗಾರೀಕರಣ. ದುಡಿಮೆಯ ಫಲದಿಂದ ಕಾಯಕದ ಕಲ್ಪನೆ ವಿಕಸಿತವಾಗಿದೆ. ಅಂತರ ರಾಷ್ಟ್ರೀಯ

ಕಾರ್ಮಿಕ ಸಂಘ ಮತ್ತು ಸಮಾಜ ವಿಜ್ಞಾನಿಗಳ ಅಧ್ಯಯನದಿಂದ ಗೋಚರವಾಗುವ ಅಂಶವೇಂದರೆ ೧೨ನೇ ಶತಮಾನದ ಶರಣರ ಕಾಯಕಕಲ್ಪನೆ ಪಾಶ್ಚಿಮಾತ್ಯ ಸಮಾಜದಲ್ಲಿ ಫಲ ನೀಡಿದೆ.

''ಟೈಮ್ಸ್ ಆಫ್ ಇಂಡಿಯಾ'' ಪತ್ರಿಕೆಯಲ್ಲಿ ೨೦೦೦ರ ಏಪ್ರಿಲ್ ತಿಂಗಳಿನಲ್ಲಿ ಪ್ರಕಟವಾದ ಲೇಖನದ ಪ್ರಕಾರ ''ಅಮೇರಿಕಾದ ಜನರು ಜೀವನದ ಅರ್ಥವನ್ನು ತಮ್ಮ ಕೆಲಸದಲ್ಲಿ ಕಂಡುಕೊಂಡಿದ್ದಾರೆ. ತಂತ್ರಜ್ಞಾನದ ಅಭಿವೃದ್ಧಿಯ ಪರಿಣಾಮವಾಗಿ ಶ್ರಮದ ಹೊರೆ ಕಡಿಮೆಯಾದಾಗ್ಯೂ ಅವರು ದಿನದಲ್ಲಿ ಹೆಚ್ಚು ಕೆಲಸದಲ್ಲಿ ತೊಡಗಿರುತ್ತಾರೆ. ದುಡಿಮೆಯಲ್ಲಿ ಧರ್ಮವನ್ನು ಕಂಡುಕೊಂಡಿದ್ದಾರೆ.

ಪ್ರಸಿದ್ಧ ಸಂಶೋಧಕರಾದ ಡಾ|| ಬೆಂಜಯನ್ ಅವರ ಪ್ರಕಾರ ಅಮೇರಿಕನ್ನರಿಗೆ ಕೆಲಸವು ಎಲ್ಲಾ ಅಭಿವೃದ್ಧಿಗೆ ಸರ್ವಾತಿಶಯವಾದುದು. ಆದರೆ ಶ್ರಮಜೀವನ ಎಲ್ಲಕ್ಕೂ ಅಂತಿಮವಾದುದು. ಅವರು ತಮ್ಮನ್ನು ತಾವು ಕೆಲಸದಲ್ಲಿ ತೊಡಗಿ ಕೊಂಡಿರುವಾಗ ಗುರುತಿಸಿಕೊಳ್ಳುತ್ತಾರೆ. ನಾನು ಹೇಗೆ ಬದುಕಿನ ಅರ್ಥವನ್ನು ಕಂಡುಕೊಳ್ಳಬೇಕು ಎಂಬುದರ ಬಗ್ಗೆ ತಮ್ಮಲ್ಲೇ ಪ್ರಶ್ನಿಸಿಕೊಳ್ಳುತ್ತಾರೆ.

'ಹುನ್ನಿಕಲ್' ಎಂಬ ವಿದ್ವಾನ್ ಕೆಲಸದ ಹೊರೆ ಮತ್ತು ಆರೋಗ್ಯ ಕುರಿತ ಸಮ್ಮೇಳನದಲ್ಲಿ ತನ್ನ ವಿಚಾರವನ್ನು ಮಂಡಿಸುತ್ತ ಅಮೇರಿಕಾ ಜನರು ಕೆಲಸದ ಅವಧಿಯನ್ನು ಕಡಿಮೆಮಾಡಿಕೊಂಡಿದ್ದಾರೆ ಎಂದು ತಿಳಿಸಿದರೆ 'ಜಾರ್ಜ್ ಬರ್ನಾರ್ಡ್‌ಷಾ' ಮತ್ತು ಜೂಲಿಮನ್‌ಹಕ್ಸ್ಲ್' ಎಂಬ ಬರಹಗಾರರ ಪ್ರಕಾರ ಅಮೇರಿಕನ್ನರು ಒಂದು ದಿವಸದಲ್ಲಿ ಎರಡು ಗಂಟೆಗಳ ಕಾಲ ಕೆಲಸದಲ್ಲಿ ತೊಡಗಿರುತ್ತಾರೆ ಎಂದಿದ್ದಾರೆ. ಇದಕ್ಕೆ ಕಾರಣ ಕೈಗಾರಿಕೆಗಳ ಬೆಳವಣಿಗೆ; ಸರ್ಕಾರದ ಧೋರಣೆ ಮತ್ತು ಸಾಮಾಜಿಕ ಮೌಲ್ಯಗಳು ೧೯ನೇ ಶತಮಾನದ ಕನಸನ್ನು ಹಾಳುಮಾಡಿ ೨೦ನೇ ಶತಮಾನವನ್ನು ವಿರಾಮದ ಶತಮಾನವನ್ನಾಗಿ ಮಾಡಿದೆ.

ಕಾರ್ಖಾನೆಗಳಲ್ಲಿ ಕೆಲಸದ ಅವಧಿಯನ್ನು ನಿಧಾನವಾಗಿ ಕಡಿಮೆ ಮಾಡುವ ಬೆದರಿಕೆಯನ್ನೊಡ್ಡಿದೆ ಇದರಿಂದ ಹೊಸ ಆರ್ಥಿಕ ವ್ಯವಸ್ಥೆಯ ಬಗ್ಗೆ ಸಂಶೋಧನೆಮಾಡಿ ಹೊಸ ಉತ್ಪನ್ನಗಳನ್ನು ಮಾರುಕಟ್ಟೆಗೆ ತಂದಿವೆ. ವಸ್ತುಗಳು ಅಗ್ಗದಧರದಲ್ಲಿ ದೊರೆತು ಅವರ ಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸಿದೆ.

ಅಮೇರಿಕನ್ನರು ಭೋಗಜೀವನವನ್ನು ನಡೆಸುತ್ತಾರೆ. ಅವರ ಆರ್ಥಿಕ ಸ್ಥಿತಿ ಉನ್ನತ ಮಟ್ಟದಲ್ಲಿದೆ. ಅವರು ಸತತವಾಗಿ ಕೆಲಸದಲ್ಲಿ ತೊಡಗಲು ಸಹಾಯಮಾಡಿದೆ. ಅಂತಿಮವಾಗಿ ೨೦ನೇ ಶತಮಾನದ ಅಂತ್ಯದಲ್ಲಿ ಅವರು ದಿನದಲ್ಲಿ ೬ ಗಂಟೆಗಳ ಕಾಲ ಕೆಲಸದಲ್ಲಿ ತೊಡಗುತ್ತಾರೆ. ಕೆಲಸ ಮತ್ತು ವಿರಾಮದ ಬಗ್ಗೆ ತಮ್ಮ ಮನಸ್ಸನ್ನು ಬದಲಾಯಿಸಿಕೊಂಡಿದ್ದಾರೆ. ಇತರೇ ಪಾಶ್ಚಿಮಾತ್ಯದೇಶಗಳು ಹೆಚ್ಚು ಕಡಿಮೆ ಅದೇ ರೀತಿಯ ಜೀವನವನ್ನು ನಡೆಸಿ ಕೆಲಸ ಮತ್ತು ವಿರಾಮವನ್ನು ಕಾಯಕಲ್ಪದಂತೆ ಮಾಡುತ್ತಾರೆ.

ಅಂತಿಮವಾಗಿ, ನನ್ನ ಅಭಿಪ್ರಾಯವನ್ನು ಹೇಳುವುದಾದರೆ ಇಂದು ನಮ್ಮ ದೇಶದಲ್ಲಿ ಅಷ್ಟೇಕೆ; ಬಸವ ಜನಿಸಿದ ಕರ್ನಾಟಕದಲ್ಲಿ ಬಹುತೇಕ ಜನರು ತಮ್ಮ ಕೆಲಸದಲ್ಲಿ ಮೌಲ್ಯಗಳನ್ನು ಮೈಗೂಡಿ ಕೊಳ್ಳಲು ಪ್ರಾಯೋಗಿಕವಾಗಿ ಕಾರ್ಯಸಿದ್ಧಾಂತವನ್ನು ಪರಿಣಾಮಕಾರಿಯಾಗಿ ಆಚರಣೆಗೆ ತಂದಿರುವುದಿಲ್ಲ. ಸೂಕ್ತವಾದ ಕೌಶಲ್ಯಗಳನ್ನು ಅಳವಡಿಸಿಕೊಂಡು ಸಾಮಾಜಿಕ ಮೌಲ್ಯಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಪ್ರಯತ್ನಮಾಡುತ್ತಿಲ್ಲ. ಇದಕ್ಕೆ ಕಾರಣ ಕೈಗಾರೀಕರಣ, ಜಾಗತೀಕರಣ, ಜನಸಂಖ್ಯೆಯ ಒತ್ತಡ, ನಿರುದ್ಯೋಗ, ಅನಾರೋಗ್ಯ, ಕೆಲಸದ ಅಭದ್ರತೆ, ಮುಂತಾದ ಸಮಸ್ಯೆಗಳು ಬದುಕಿನ ಮೌಲ್ಯಗಳನ್ನು ಅರಿಯಲು ತೊಡರುಗಳಾಗಿವೆ.

೧೨ನೇ ಶತಮಾನದಲ್ಲಿ ಬಸವಣ್ಣನವರು ರೂಪಿಸಿದ ಸಮಾಜದಲ್ಲಿ ಜೀವನದ ಮೌಲ್ಯಗಳನ್ನು ರೂಢಿಸಿಕೊಳ್ಳಲು ಒಳ್ಳೆಯ ಪರಿಸರ ನಿರ್ಮಾಣವಾಗಿತ್ತು. ಸಾಮಾಜಿಕ ಮೌಲ್ಯಗಳು ಆತ್ಮವಿಕಾಸಕ್ಕೆ, ಆತ್ಮ ವಿಮರ್ಶೆಗೆ ಪಕ್ವವಾದ ವಾತಾವರಣವಿತ್ತು. ಪ್ರತಿಯೊಬ್ಬರು ತಮ್ಮ ಕಾಲ ಮತ್ತು ಶಕ್ತಿಯನ್ನು ಹಿತಕರವಾದ ಹಾಗೂ ಅಗತ್ಯವಾದ ಪರಿಸರವನ್ನು ಸೃಷ್ಟಿಮಾಡಲು ತ್ಯಾಗಮಾಡುತ್ತಿದ್ದರು. ಆಡಳಿತ ಸುಧಾರಣೆ ಮತ್ತು ಸಾಮಾಜಿಕ ಬಳಕೆಗೆ ಶ್ರಮಿಸುತ್ತಿದ್ದರು.

**ಕೊನೆಯ ಮಾತು :** ಪಾಶ್ಚಿಮಾತ್ಯರು ಕಂಡುಕೊಂಡ ''ಕಾಯಕವೇ ಕೈಲಾಸ'' ಕಲ್ಪನೆಯನ್ನು ನಾವು ಮರೆತಿದ್ದೇವೆ. ಅದು ನಮ್ಮಿಂದ ದೂರವಾಗಿದೆ. ಈ ಕಲ್ಪನೆಯನ್ನು ವಿಶ್ವಕ್ಕೆ ತೋರಿಸಿಕೊಡಬೇಕಾದ ನಾವೇ ವಿಫಲರಾಗಿದ್ದೇವೆ. ವಿಶ್ವದ ಜನರಿಗೆ ಮಾರ್ಗದರ್ಶನ ತಪ್ಪಿಹೋಗುತ್ತಿದೆ ಎಂಬುದು ನಿಜಕ್ಕೂ ಶೋಚನೀಯ. ❋





ನಿಮಗಿದು ತಿಳಿದಿರಲಿ

# ತರಕಾರಿಗಳು ಮತ್ತು ಸೊಪ್ಪುಗಳು

ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

## ತರಕಾರಿಗಳು

ಸೊಪ್ಪುಕಾಯಿ ಮುಂತಾದ ತರಕಾರಿಗಳಲ್ಲಿ ಪೌಷ್ಟಿಕ ಪದಾರ್ಥವು ಅತ್ಯಲ್ಪವಾಗಿರುತ್ತದೆ. ಆದರೂ ಇವುಗಳಲ್ಲಿ ಅನೇಕ ವಿಧ ಲವಣಗಳು ಇರುವುದರಿಂದ ಸೊಪ್ಪು ಕಾಯಿಗಳು ಶರೀರ ಪೋಷಣೆಗೆ ಅತ್ಯಂತ ಸಹಾಯಕಗಳಾಗಿರುತ್ತವೆ. ಮತ್ತು ಆ ಲವಣಗಳು ಶರೀರದ ಆರೋಗ್ಯಕ್ಕೆ ಅತ್ಯಾವಶ್ಯಕಗಳೂ ಆಗಿರುತ್ತವೆ.

ಮೆಂತ್ಯ, ಸಬ್ಬಸಿಗೆ ಮೊದಲಾದ ಕೆಲವು ಹಸಿರು ಸೊಪ್ಪುಗಳಲ್ಲಿ ಬೇಗನೆ ಆರಿಹೋಗುವಂತಹ ಅನೇಕ ವಿಧ ತೈಲಗಳಿರುತ್ತವೆ. ಈ ಕಾರಣದಿಂದಲೇ ಅವುಗಳಲ್ಲಿ ಹೆಚ್ಚಾದ ವಾಸನೆ ಇರುತ್ತದೆ. ಸಬ್ಬಸಿಗೆ, ಕಿರುಕ ಸಾಲೆ, ಹೊನಗೊನೆ, ಮೆಂತ್ಯ, ವಿಷ್ಣುಕಾಂತಿ ಸೊಪ್ಪುಗಳೂ ಮತ್ತು ಹೀರೇಕಾಯಿ, ತುಪ್ಪಹೀರೇ ಕಾಯಿಗಳೂ, ಸಾಮಾನ್ಯವಾಗಿ ರೋಗಿಗಳಿಗೆ ಪಥ್ಯಗಳಾಗಿವೆ.

ಕೆಂಪು ಮೂಲಂಗಿಯ ಹಲವಾ ಬಹಳ ರುಚಿಕರವೂ ಪುಷ್ಟಿದಾಯಕವೂ ಆಗಿರುತ್ತದೆ. ಮೂಲಂಗಿಯೂ ಹಸಿಯ ದಾದರೂ ಸರಿಯೇ; ಬೇಯಿಸಿರುವುದಾದರೂ ಸರಿಯೇ ಮೂಲವ್ಯಾಧಿಗೆ ಬಹಳ ಲಾಭಪ್ರದವಾಗಿದೆ. ಇದೇ ರೀತಿಯಾಗಿ ಸೂರಣದ ಗಡ್ಡೆಯಾದರೂ ಮೂಲರೋಗಕ್ಕೆ ಪರಮೋಪಕಾರಿ ಯಾಗಿರುತ್ತದೆ. ಈರುಳ್ಳಿಯು ಪಾಚಕವೂ, ಕಾಮೋತ್ತೇಜಕವೂ ಆಗಿದೆ ಮತ್ತು ಕಾಲರಾ ರೋಗಕ್ಕೆ ಸಿದ್ಧೌಷಧವಾಗಿದೆ. ಬೆಳ್ಳುಳ್ಳಿಯು ಕ್ಷಯರೋಗವುಳ್ಳವರಿಗೆ ತಿನ್ನುವುದಕ್ಕೂ ಲೇಪನಕ್ಕೂ ಉಪಯುಕ್ತವಾಗಿರುವುದಲ್ಲದೆ ವಿಶೇಷ ಗುಣಕಾರಿಯೂ ಆಗಿರುತ್ತದೆ.

**ಕಿರುಕಸಾಲೆ ಸೊಪ್ಪು**

ಕಿರುಕಸಾಲೆ ಸೊಪ್ಪು ಶೀತಗುಣವುಳ್ಳದ್ದು. ಈ ಸೊಪ್ಪು ಎಲ್ಲಾ ಸೊಪ್ಪುಗಳಿಗಿಂತಲೂ ವಿಶೇಷ ಗುಣಕಾರಿಯಾಗಿರುವುದರಿಂದಲೇ ಇದು ''ಪಥ್ಯಶಾಕ'' ಎಂಬ ಸಾರ್ಥಕನಾಮವನ್ನು ಹೊಂದಿದೆ. ಇದರ ಸೇವನೆಯಿಂದ ತ್ರಿದೋಷಗಳ ವಿಕಾರಗಳು ಶಾಂತವಾಗುತ್ತವೆ. ಮತ್ತು ವಿಷವಿಕಾರ, ಕಣ್ಣುಗಳ ಸಂಬಂಧವಾದ ಪರೆ, ಮಂಜು, ನೀರೂರುವುದು, ಮುಂತಾದ ರೋಗಗಳಿಗೂ, ಮೂತ್ರವಿಕಾರ, ರಕ್ತವಿಕಾರ ಮುಂತಾದವುಗಳಿಗೂ ದಿವ್ಯೌಷಧವಾಗಿದೆ. ಮತ್ತು ಸಕಲವಿಧ ರೋಗಿಗಳಿಗೂ ಪಥ್ಯವಾಗಿದೆ. ಮೂತ್ರವನ್ನು ಶುದ್ಧಗೊಳಿಸತಕ್ಕ ಶಕ್ತಿಯು ಇದರಲ್ಲಿ ವಿಶೇಷವಾಗಿದೆ. ಕಾಡಿನಲ್ಲಿ ಸ್ವತಂತ್ರ ರೀತಿಯಿಂದ ಬೆಳೆಯತಕ್ಕ ಕಿರಿಕಸಾಲೆಯಲ್ಲಿ ವಿಶೇಷಗುಣಗಳಿರುತ್ತವೆ. ಪಟ್ಟಣಗರಿಗೆ ಇಂತಹ ಸೊಪ್ಪು ದುರ್ಲಭವಾಗಿರುವುದರಿಂದ ಅದರ ಅಭಾವವಿರುವಾಗ ತೋಟದಲ್ಲಿ ಬೆಳೆಯಿಸುವುದನ್ನೇ ಉಪಯೋಗಿಸಬಹುದು. ಆದರೆ ಇದು ಅಷ್ಟು ವಿಶೇಷವಾದ ಪ್ರಯೋಜನವನ್ನೀಯಲಾರದು. ಕಿರುಕಸಾಲೆಯು ವಿಷಜಂತುಗಳ ವಿಷಕ್ಕೆ ವೈರಿಯಾಗಿದೆ.

ಬೇರು ಸಹಿತವಾಗಿ ಈ ಸೊಪ್ಪಿನ ಗಿಡವನ್ನು ತಂದು ಅಕ್ಕಿಯನ್ನು ತೊಳೆದ ನೀರಿನಲ್ಲಿ ಅರೆದು ಶೋಧಿಸಿಕೊಂಡು ಕಾಲು ಕಾಲು ಗಂಟೆಗೆ ಒಂದೊಂದು ತೊಲದಂತೆ ಕುಡಿಸುತ್ತಿದ್ದರೆ ಉಗ್ರಸರ್ಪದ ವಿಷಯವೂ ಶಾಂತವಾಗುವುದೆಂದು ಅನೇಕ ವೈದ್ಯ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಕಿರುಕಲಾಸೆಯ ಬೇರು, ಅಡಿಗೆ ಮನೆ ಅಥವಾ ಬಚ್ಚಲು ಮನೆಯ ಗೋಡೆಗಳಿಗೆ ಹತ್ತಿಕೊಂಡಿರುವ ಕಾಡಿಗೆ, ಇವೆರಡನ್ನೂ ಸಮವಾಗಿ ತಂದು ಚಟ್ನಿಯಂತೆ ಅರೆಯಬೇಕು. ಈ ಚಟ್ನಿಯ ನಾಲ್ಕರಷ್ಟುತುಪ್ಪ, ತುಪ್ಪದ ನಾಲ್ಕರಷ್ಟುಹಾಲು, ಇವೆರಡನ್ನೂ ಒಂದು ಪಾತ್ರೆಯಲ್ಲಿ ಹಾಕಬೇಕು. ಆ ಪಾತ್ರೆಯಲ್ಲಿ ಮೇಲಿನ ಚಟ್ನಿಯನ್ನು ಹಾಕಿ ಮಂದಾಗ್ನಿಯಿಂದ ಕಾಯಿಸಿ ಹಾಲು ಪೂರ್ತಿಯಾಗಿ ಹೋಗಿ ತುಪ್ಪವು ಮಾತ್ರ ಉಳಿದ ಮೇಲೆ ಶೋಧಿಸಿಕೊಂಡು ಸೀಸೆಯಲ್ಲಿಟ್ಟುಕೊಳ್ಳಬೇಕು. ಈ ತುಪ್ಪವನ್ನು ಲೇಪಿಸುವುದರಿಂದ ಮತ್ತು ಗಂಟೆ ಗಂಟೆಗೆ ಒಂದೊಂದು ತೊಲದಂತೆ ವಿಷವು ಇಳಿಯುವವರೆಗೂ ಕುಡಿಸುವುದರಿಂದ ಸಮಸ್ತ ವಿಷ ವಿಕಾರಗಳು ಶಾಂತವಾಗುತ್ತವೆ. ಇದು ''ತುಂಡಲೀಯಘೃತ'' ಎಂಬ ಹೆಸರಿನಿಂದ ವೈದ್ಯಗ್ರಂಥದಲ್ಲಿ ಬಹಳವಾಗಿ ಹೊಗಳಲ್ಪಟ್ಟಿದೆ. ಮತ್ತು ಇದನ್ನು ಉಪಯೋಗಿಸಿದ ನನ್ನ ಒಬ್ಬ ಮಿತ್ರರು ಇದರ ವಿಷಯವಾಗಿ

ಒಳ್ಳೆಯ ಅಭಿಪ್ರಾಯವನ್ನು ಕೊಟ್ಟಿರುವರು. ಇದನ್ನು ಮೊದಲೇ ಮಾಡಿಟ್ಟುಕೊಂಡಿದ್ದು ಸಮಯದಲ್ಲಿ ಉಪಯೋಗಿಸುವುದು ಉತ್ತಮ.

ಕಿರಿಕಸಾಲೆಸೊಪ್ಪಿನ ಗಿಡವನ್ನು ಬೇರುಸಹಿತವಾಗಿ ಕಿತ್ತು ತಂದು ಒಣಗಿಸಿ ಸುಡಬೇಕು. ಆ ಬೂದಿಯನ್ನು ನೀರನೊಡನೆ ಅರೆದು ಮುಖದಲ್ಲಿರುವ ಕಲೆಗಳ ಮೇಲೆ ಲೇಪಿಸಿ ಅರ್ಧಗಂಟೆಯವರೆಗೆ ಬಿಸಲಿನಲ್ಲಿ ಕುಳಿತುಕೊಂಡಿದ್ದು, ಲೇಪವು ಒಣಗಿದ ಮೇಲೆ ಬಿಸಿನೀರಿನಿಂದ ತೊಳೆಯಬೇಕು. ಇಷ್ಟಾದ ಮೇಲೆ ಸೈಂಧವಲವಣವನ್ನು ಚೂರ್ಣಿಸಿ ಬಟ್ಟೆಯಿಂದ ಶೋಧಿಸಿಕೊಂಡು ಆ ಕಲೆಗಳಿಗೆ ತಿಕ್ಕಬೇಕು. ಈ ರೀತಿ ಮಾಡುವುದರಿಂದ ಮುಖದ ಮೇಲಿರುವ ಕಲೆಗಳು ನಾಶವಾಗುತ್ತವೆ.

ಕಿರುಕಸಾಲೆ ಬೇರಿನ ರಸ ಅರ್ಧ ತೊಲ, ರಸವತ್ತು ಅರ್ಧ ತೊಲ, ಇವೆರಡನ್ನು ಕೂಡಿಸಿ ಜೇನುತುಪ್ಪದೊಡನೆ ಕುಡಿಯುವುದರಿಂದ ೭ ದಿನಗಳಲ್ಲಿ ಪ್ರದರ ರೋಗವು ಶಾಂತವಾಗುತ್ತದೆ. ರಸವತ್ತು ಸಿಗದಿದ್ದರೆ ಮರದರಿಶಿನವನ್ನು ತಂದು ಚೂರ್ಣಿಸಿ ಕುರುಕಸಾಲೆ ಬೇರಿನ ರಸದಲ್ಲಿ ಕೂಡಿಸಿ ಸೇವಿಸಬಹುದು. 'ರಸವತ್ತು' ಮರದರಿಶಿನ ಕಷಾಯವನ್ನೇ ಗಟ್ಟಿಗೆ ಮಾಡಿ ಸಿದ್ಧಗೊಳಿಸಲ್ಪಟ್ಟಿರುವುದಾಗಿದೆ. ಇದನ್ನು 'ರಸಾಂಜನ'ವೆಂತಲೂ ಕರೆಯುವುದುಂಟು.

ಕಿರುಕಸಾಲೆ ಸೊಪ್ಪನ್ನು ಬೇಯಿಸಿ ಸ್ವಲ್ಪ ಉಪ್ಪು ಮೆಣಸಿನ ಪುಡಿ ಮುಂತಾದವುಗಳ ಸಂಸ್ಕಾರವನ್ನು ಮಾಡಿ ನಿತ್ಯದಲ್ಲಿ ತಿನ್ನುವುದರಿಂದ ಆಶ್ಮರೀ (ಮೂತ್ರದ ಕಲ್ಲು) ರೋಗವು ಶಾಂತವಾಗುವುದು.

ಕಿರುಕಸಾಲೆ ಸೊಪ್ಪಿನ ೩ ತೊಲ ರಸದಲ್ಲಿ ೧ ತೊಲ ಸೌತೇ ಬೀಜವನ್ನು ಮತ್ತು ೨ ಗುಂಜಿ ತೂಕದ ಪೆಟ್ಲುಪ್ಪನ್ನು ಅರೆದು ಕುಡಿಯುವುದರಿಂದ ಉರಿಮೂತ್ರವು ಶಾಂತವಾಗುತ್ತದೆ. ಈ ಸೊಪ್ಪನ್ನು ಉಷ್ಣಸಂಬಂಧವಾದ ಎಲ್ಲಾ ರೋಗಿಗಳೂ ತಮ್ಮ ನಿತ್ಯದ ಆಹಾರದಲ್ಲಿ ಧಾರಾಳವಾಗಿ ಉಪಯೋಗಿಸಬಹುದು.

**ಹೊನಗೊನೆ ಸೊಪ್ಪು**

ಹೊನೆಗೊನೆಸೊಪ್ಪು ಶೀತಗುಣವುಳ್ಳದ್ದು, ತ್ರಿದೋಷನಾಶಕವಾದುದು, ಸಕಲವಿಧ ನೇತ್ರರೋಗಗಳನ್ನೂ ನಾಶಮಾಡುವುದು. ವೀರ್ಯವೃದ್ಧಿಯನ್ನುಂಟುಮಾಡುವುದು. ಕೆಮ್ಮು, ದಮ್ಮು, ಜ್ವರ, ಮೂಲವ್ಯಾಧಿ, ಮೇಹವ್ಯಾಧಿ, ಕೃಮಿರೋಗ, ಇವುಗಳನ್ನೆಲ್ಲಾ ಜಯಿಸುತ್ತದೆ. ಈ ಹೊನೆಗೊನೆಸೊಪ್ಪು ಯಾವಾಗಲೂ ಎಲ್ಲರಿಗೂ ಸಾಮಾನ್ಯವಾಗಿ ಪಥ್ಯವಾಗಿಯೇ ಇರುತ್ತದೆ.

ಈ ಸೊಪ್ಪನ್ನು ಬೇರುಸಹಿತವಾಗಿ ತಂದು ಕುಟ್ಟಿ ರಸವನ್ನು ತೆಗೆದು ೧ ಸೇರು ರಸಕ್ಕೆ ೧ ಪಾವು ಎಳ್ಳೆಣ್ಣೆಯನ್ನು ಹಾಕಿ ಕಾಯಿಸಿ ರಸವೆಲ್ಲಾ ಇಂಗಿದ ಮೇಲೆ ಇಳಿಸಿಕೊಂಡು ಎಣ್ಣೆಯನ್ನು ಶೋಧಿಸಿಕೊಂಡು ಇಟ್ಟುಕೊಳ್ಳಬೇಕು. ಈ ಎಣ್ಣೆಯನ್ನು ನಿತ್ಯದಲ್ಲಿ ತಲೆಗೆ ಹಚ್ಚಿತಿಕ್ಕುವುದರಿಂದ ಮೆದುಳು ಮತ್ತು ಕಣ್ಣುಗಳ ಉಷ್ಣತೆಯು ಶಾಂತವಾಗಿ ಕಣ್ಣುಗಳಲ್ಲಿ ಬಲ ಮತ್ತು ತೇಜಸ್ಸು ಹೆಚ್ಚುತ್ತದೆ.

ಹೊನೆಗೊನೆಸೊಪ್ಪು ಮತ್ತು ಬೇಲದ ಸೊಪ್ಪು ಇವೆರಡನ್ನೂ ಒಣಗಿಸಿ ಚೂರ್ಣಮಾಡಿ ಸಮಭಾಗದ ಸಕ್ಕರೆಯನ್ನು ಕೂಡಿಸಿ ಇಟ್ಟುಕೊಳ್ಳಬೇಕು. ಪ್ರಾತಃಕಾಲ, ಸಾಯಂಕಾಲಗಳಲ್ಲಿ ೧-೧ ತೊಲ ಚೂರ್ಣವನ್ನು ಸೇವಿಸಿ, ಮೇಲೆ ಅಮೃತಬಳ್ಳಿಯ ೩ ತೊಲ ರಸವನ್ನು ಕುಡಿಯಬೇಕು. ೪೮ ದಿನಗಳಲ್ಲಿ ವೀರ್ಯದ ಉಷ್ಣತೆಯು ಶಾಂತವಾಗಿ ಸ್ವಪ್ನದೋಷ, ವೀರ್ಯಸ್ರಾವ ಮುಂತಾದ ದೋಷಗಳು ದೂರವಾಗುವುವು. ಔಷಧ ಸೇವನೆಯ ಕಾಲದಲ್ಲಿ ಹುಳಿ, ಕಾರ, ಎಣ್ಣೆ, ಬೆಲ್ಲಗಳನ್ನು ಬಹಳ ಕಡಿಮೆ ಮಾಡುವುದಲ್ಲದೆ ಉಷ್ಣವರ್ಧಕಗಳಾದ ಇತರ ಪದಾರ್ಥಗಳ ಸೇವನೆಯನ್ನೂ ಬಿಡುವುದುತ್ತಮ.

ಹೊನೆಗೊನೆ ಸೊಪ್ಪಿನ ರಸ ೨ ತೊಲ, ಮೂಲಂಗಿ ಸೊಪ್ಪಿನ ರಸ ೨ ತೊಲ, ಈ ಎರಡು ರಸಗಳಿಗೆ ಸ್ವಲ್ಪ ಸೈಂಧವ ಲವಣವನ್ನು ಸೇರಿಸಿ ಕುಡಿಯುವುದರಿಂದ ಪರೆಯು ಕತ್ತರಿಸಿ ಹೋಗುತ್ತದೆ.

ಹೊನೆಗೊನೆಸೊಪ್ಪು ೫ ತೊಲ, ಹುಣಸೆಯ ಚಿಗರು ೫ ತೊಲ, ಪಚ್ಚಕರ್ಪೂರ ೧ ತೊಲ, ರಸವತ್ತು ಅಥವಾ ರಸಾಂಜನ ೧ ತೊಲ ಇವುಗಳನ್ನೆಲ್ಲಾ ಒಂದು ಕಂಚಿನ ತಟ್ಟೆಯಲ್ಲಿ ಹಾಕಬೇಕು. ಅನಂತರ ಬೇವಿನ ಒಂದು ದಪ್ಪ ಮತ್ತು ಸರಳವಾದ ತುಂಡಿನ ತುದಿಗೆ ಒಂದು ಹಳೆಯ ಮೂರು ಕಾಸಿನ ಬಿಲ್ಲೆಯನ್ನು ಅಂಟಿಸಿ ಮೇಲೆ ತಾಮ್ರದ ಮೊಳೆಯನ್ನು ಹೊಡೆಯಬೇಕು, ಈ ತುಂಡಿನ ತುದಿಯಿಂದ ತಟ್ಟೆಯಲ್ಲಿರುವ ಪದಾರ್ಥಗಳನ್ನು ಪುತ್ರವತಿಯಾದ ಸ್ತ್ರೀಯಳ ಎದೆ ಹಾಲಿನೊಡನೆ ೯೬ ಗಂಟೆಗಳ ಕಾಲ ಅರೆದು ಅನಂತರ ಒಂದು ಸೀಸೆಯಲ್ಲಿ ಇಟ್ಟುಕೊಳ್ಳಬೇಕು. ಇದನ್ನು ಕಣ್ಣುಗಳಿಗೆ ಹಚ್ಚುವುದರಿಂದ ಕಣ್ಣುಗಳಲ್ಲಿ ಬೆಳೆದಿರುವ ದುರ್ಮಾಂಸವು ಕತ್ತರಿಸಿಹೋಗುತ್ತದೆ. ಇದನ್ನು ಪರಿಶ್ರಮದಿಂದ ಮಾಡಿಟ್ಟುಕೊಂಡು ಸ್ವಲ್ಪಕಾಲದವರೆಗೆ ಬೇಸರವಿಲ್ಲದೆ ಹಚ್ಚಿದರೆ ಉತ್ಕೃಷ್ಟವಾದ ಫಲವು ದೊರೆಯುವುದರಲ್ಲಿ ಯಾವ ಸಂಶಯವೂ ಇಲ್ಲ. ಹಳೆಯ ಕಾಸು ಸಿಗದಿದ್ದರೆ ತಾಮ್ರದ ತುಂಡು ಅಥವಾ ಮತ್ತಾವ ತಾಮ್ರದ ವಸ್ತುವನ್ನಾದರೂ ಉಪಯೋಗಿಸಬಹುದು.

*(ಮುಂದುವರೆಯುತ್ತದೆ)*





# ಪರಮ ಪೂಜ್ಯ ಶ್ರೀ ಶ್ರೀ ಅಟವೀ ಸ್ವಾಮಿಗಳ ೧೦೦ನೆಯ ಪುಣ್ಯಾರಾಧನೆ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ ವೇದಿಕೆಯಲ್ಲಿ ಶ್ರೀ ಅಟವೀ ಸುಕ್ಷೇತ್ರದ ಪರಮಪೂಜ್ಯ ಶ್ರೀ ಶ್ರೀ ಅಟವೀ ಶಿವಲಿಂಗ ಮಹಾಸ್ವಾಮಿಗಳು, ಇತಿಹಾಸ ತಜ್ಞರು, ಮಹಾಮನೆ ಸಂಪಾದಕರೂ ಆದ ಶ್ರೀ ಎಂ.ಜಿ. ನಾಗರಾಜ್ ಹಾಗೂ ಡಾ. ಬಿ. ನಂಜುಂಡಸ್ವಾಮಿ ಅವರನ್ನು ಕಾಣಬಹುದು.

"ಶ್ರೀ ಅಟವೀಶ ಮಹಾಸ್ವಾಮಿಗಳವರು ಮಹಾ ದಾರ್ಶನಿಕರು, ದಾಸೋಹ ತತ್ವನಿಷ್ಠರು, ಶಿವಯೋಗ ಸಾರ್ವಭೌಮರು , ಮಾನವತಾ ಪ್ರೇಮಿಗಳು, ಶ್ರೀಗಳವರು ಶ್ರೀಮಠದಲ್ಲಿ ಪ್ರಾರಂಭಿಸಿದ ದಾಸೋಹ ಸೇವೆ ಅವಿಚ್ಛಿನ್ನವಾಗಿ ನಡೆದುಬರಲು ಅವರ ಸಂಕಲ್ಪಶಕ್ತಿಯೇ ಮೂಲಕಾರಣ, ಗುಬ್ಬಿ ಚಿಕ್ಕತೊಟ್ಲುಕೆರೆ ಪೂಜ್ಯರ ಕಾರ್ಯಕ್ಷೇತ್ರವಾದರೂ ಸಿದ್ಧಗಂಗೆಯಲ್ಲಿ ಶ್ರೀಗಳವರ ಶಿವಯೋಗ ಸಂಪತ್ತು ಇಂದಿಗೂ ಪ್ರಜ್ವಲಿಸುತ್ತಿದೆ. ತಮ್ಮ ಅಂತಃಕರಣದ ಅಪಾರ ಪ್ರೀತಿಯನ್ನು ಲಿಂ : ಉದ್ದಾನ ಮಹಾಸ್ವಾಮಿಗಳವರಿಗೆ ಕರುಣಿಸಿದ ಜಂಗಮ ಜ್ಯೋತಿಗಳು ಅಟವೀಶ್ವರರು" ಎಂದು ಪರಮ ಪೂಜ್ಯ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ತಿಳಿಸಿದರು. ಅವರು ಶ್ರೀ ಕ್ಷೇತ್ರದಲ್ಲಿ ಜನವರಿ ೧೩ರಂದು ಏರ್ಪಡಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಅಟವೀ ಸ್ವಾಮಿಗಳವರ ೧೦೦ನೇ ಪುಣ್ಯಾರಾಧನಾ ಸಮಾರಂಭದ ಸಾನ್ನಿಧ್ಯವಹಿಸಿ ಆಶೀರ್ವಚನ ನೀಡುತ್ತಿದ್ದರು. ಅವರು ಮುಂದುವರಿದು "ಪ್ರೀತಿ, ವಿಶ್ವಾಸ, ಸಹಬಾಳ್ವೆಯಿಂದ ಜೀವನ ನಡೆಸುವ ಅವಶ್ಯಕತೆ ಇಂದು ಹೆಚ್ಚಾಗಿ ಆಗಬೇಕಾಗಿದೆ ವಿಜ್ಞಾನ ನಮಗಿಂದು ಒಳ್ಳೆಯ ಕೊಡುಗೆಯನ್ನು ನೀಡಿದೆ, ಅಷ್ಟೇ ಭಯದ ವಾತಾವರಣವನ್ನು ಮೂಡಿಸಿದೆ. ಸಾವಿರಾರು ವರ್ಷಗಳಿಂದ ಕಟ್ಟಿ ಬೆಳೆಸಿದ ಜಗತ್ತನ್ನು ಒಂದು ಅಣುಬಾಂಬಿನಿಂದ ೫ ನಿಮಿಷಗಳಲ್ಲಿ ನಾಶಮಾಡುವ ಸ್ಥಿತಿ ನಿರ್ಮಾಣವಾಗಿದೆ. ಮನುಷ್ಯ ಮಾನವನಾಗಿ ಬಾಳುವೆ ಮಾಡುವ ಕಲೆಯನ್ನು ಕಲಿತುಕೊಳ್ಳ



ಪರಮಪೂಜ್ಯ ಶ್ರೀ ಶ್ರೀ ಅಟವೀ ಸ್ವಾಮಿಗಳವರ ಭಾವಚಿತ್ರದ ಪಲ್ಲಕ್ಕಿ ಉತ್ಸವ



ಶ್ರೀ ಹೆಚ್.ಎಸ್. ನೀಲಕಂಠಯ್ಯ ಮತ್ತು ಸಂಗಡಿಗರಿಂದ ವೀರಗಾಸೆ ನೃತ್ಯ

ಬೇಕು. ಇದೇ ನಿಜವಾದ ಧರ್ಮ. ಧರ್ಮದ ಬಗ್ಗೆ ಭರತಖಂಡ ಪ್ರಾಚೀನ ಕಾಲದಿಂದ ತುಂಬಾ ವಿಚಾರ ಪೂರಕವಾದ, ಅರ್ಥಪೂರ್ಣವಾದ ಸಂದೇಶವನ್ನು ನೀಡಿದೆ. ಧರ್ಮ ಮತ್ತು ವಿಜ್ಞಾನ ಸಮನ್ವಯವಾದರೆ ಮಾತ್ರ ಜಗತ್ತಿನಲ್ಲಿ ಶಾಂತಿ ನೆಮ್ಮದಿ ದೊರೆಯುತ್ತದೆ. ಈ ತತ್ತ್ವವನ್ನು ಅರ್ಥಮಾಡಿಕೊಂಡು ಬದುಕಬೇಕು.''

'ಶರಣರು ಅದ್ಭುತವಾದ ಮಾರ್ಗದರ್ಶನ ನೀಡಿದರು. ಅನುಭವ ಮಂಟಪದ ಮೂಲಕ ಬದುಕಿಗೆ ಬೆಳಕನ್ನು ನೀಡಿದರು. ಪ್ರತಿಯೊಬ್ಬರೂ ಆತ್ಮವಿಮರ್ಶೆ ಮಾಡಿಕೊಳ್ಳಬೇಕು. ಜಾತಿ ರಾಜಕೀಯ ಕಡಿಮೆಯಾಗಬೇಕು. ಮಾನವ ಪ್ರೀತಿಯನ್ನು ಬೆಳೆಸಿಕೊಳ್ಳಬೇಕು. ಆರ್ಥಿಕವಾಗಿ, ಸಾಮಾಜಿಕವಾಗಿ ಸಾಮರಸ್ಯ ಮೂಡಬೇಕಾಗಿದೆ'' ಎಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಚಿಕ್ಕತೊಟ್ಲುಕೆರೆ ಶ್ರೀ ಅಟವೀ ಸುಕ್ಷೇತ್ರದ ಪೂಜ್ಯ ಶ್ರೀ ಶ್ರೀ ಅಟವೀ ಶಿವಲಿಂಗ ಮಹಾಸ್ವಾಮಿಗಳು ''ಬಸವ ಪುರಾಣದಲ್ಲಿ ಬರುವ ರೇಚಣ್ಣನವರೇ ಅಟವೀಶ್ವರರಾಗಿ ಅವತರಿಸಿ ಉತ್ತರ ಕರ್ನಾಟಕದಿಂದ ಸಿದ್ಧಗಂಗೆ, ಗುಬ್ಬಿ, ಚಿಕ್ಕತೊಟ್ಲುಕೆರೆ ಸುಕ್ಷೇತ್ರಗಳನ್ನು ಸಮಾಜಮುಖಿಯಾಗುವಂತೆ ದಾಸೋಹ ಸೇವೆಯನ್ನು ವಿಸ್ತರಿಸಿದರು. ಪೂಜ್ಯರನ್ನು ಕುರಿತು ಸಂಶೋಧಕರು ಇನ್ನೂ ಅವರ ಚರಿತ್ರೆಯನ್ನು ಹುಡುಕುತ್ತಲೇ ಇದ್ದಾರೆ, ಅಟವೀಶ್ವರರು ಭಾವಗೋಚರರು, ಅವರ ಸಾಹಿತ್ಯ ಭಾವಪರವಾದುದು, ಅದು ಅನುಭಾವ ಸಾಹಿತ್ಯ, ಆ ಸಾಹಿತ್ಯ ಎಂದೆಂದೂ ಚಿಂತನ'' ಎಂದು ನುಡಿದರು.

ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ಧ ಮಹಾಮನೆ ಸಂಪಾದಕರು, ಹಿರಿಯ ಇತಿಹಾಸ ತಜ್ಞರೂ ಆದ ಶ್ರೀ ಎಂ.ಜಿ. ನಾಗರಾಜ್‌ಅವರು ಅಟವೀಶ್ವರರನ್ನು ಕುರಿತು ಮತಕೂರು ನಂಡುಂಡ ಶಿವಯೋಗಿಗಳು ರಚಿಸಿದ ಅಟವೀಶ್ವರ ಚರಿತ್ರೆಯಿಂದ ಅನೇಕ ಪ್ರಸಂಗಗಳನ್ನು ಉಲ್ಲೇಖಿಸುತ್ತಾ ಶಿವಯೋಗಿಗಳ ವ್ಯಕ್ತಿತ್ವ ಅನುಪಮವಾದುದು ಎಂದರು.

ಅವರು ತಮ್ಮ ಉಪನ್ಯಾಸದಲ್ಲಿ ''ಬಾಳುವ ಬದುಕಿನಲ್ಲಿ ಸುಶೀಲ ವ್ಯಕ್ತಿತ್ವ ಬೆಳೆಸಿಕೊಂಡವರ ಚಾರಿತ್ರ್ಯ, ಚರಿತ್ರೆ ಆಗುತ್ತದೆ. ಅವರ ಅನುಭಾವ ಜಗತ್ತಿಗೆ ದರ್ಶನದ ಬೆಳಕನ್ನೂ ತೋರುತ್ತದೆ. ಇಂಥ ಅನುಭಾವಿಗಳ ಯಾವ ಸಿದ್ಧಿ ಸಾಧನೆಗಳೂ ಭಕ್ತವರ್ಗಕ್ಕೆ ಮಹಿಮೆ ಎನಿಸುತ್ತಿದೆ, ಪವಾಡ ಎನಿಸುತ್ತದೆ. ನಂಬುಗೆಯು ಅಂಥ ಪವಾಡ ಪುರುಷರಲ್ಲಿ ಬೆಳೆದು ಆರಾಧ್ಯ ಭಾವನೆ ನಿರಂತರವಾಗಿಬಿಡುತ್ತದೆ. ಮಹಾಶಿವಯೋಗಿ ಶ್ರೀಮದ್ ಅಟವೀಶ್ವರರು ತಮ್ಮ ಬದುಕನ್ನು ಜನತೆಯ ಒಳತಿಗಾಗಿ ಮೀಸಲಿಟ್ಟು





ನಡೆದುಕೊಂಡವರು. ಅಂಥವರ ಚರಿತ್ರೆಯನ್ನೂ ಇಂದಿನ ಯುಗಧರ್ಮಕ್ಕನುಗುಣವಾಗಿ ಆಧಾರಗಳ ಮೂಲಕವಾಗಿಯೂ ತಿಳಿದುಕೊಳ್ಳಬೇಕು. ಇದು ಇಂದಷ್ಟೇ ಅಲ್ಲ; ಮುಂದಿನ ತಲೆಮಾರುಗಳಿಗೂ ಆಸ್ತಿಯಾಗುತ್ತದೆ. ನಿರಂಜನ ಪ್ರಣವ ಸ್ವರೂಪವನ್ನು ಸಾಧಿಸಿದ ಶ್ರೀ ಅಟವೀಶ್ವರರು ಸಿದ್ಧಗಂಗೆಯ ದಾಸೋಹ ಕ್ರಿಯೆಯ ಮೊದಲಿಗ ರಾಗಿ, ವಿದ್ಯೆಯ ಬೆಳಕಿಗೆ ಕಾರಣರಾದವರು. ಸಾಮಾನ್ಯರ ಬದುಕನ್ನು ಹಸುಗೊಳಿಸಿದರು. ಈ ಮಹಾವ್ಯಕ್ತಿತ್ವದ ೧೦೦ನೇ ವರ್ಷದ ಪುಣ್ಯಾರಾಧನೆ, ಭಕ್ತಜನವೃಂದದಲ್ಲಿ ಅವರು ಚಿರಂತನಗೊಂಡಿರುವುದೇ ಸಾಕ್ಷಿಯಾಗಿದೆ.

ಸಿದ್ಧಗಂಗಾ ಕ್ಷೇತ್ರದ ಶ್ರೀ ಸನ್ನಿಧಿಯವರು ಶ್ರೀ ಅಟವೀಶ್ವರರ ಮಣಿಹಗಳ ಸದಾಶಯಗಳನ್ನೆಲ್ಲ ಇಂದಿಗೂ ಜಾಗೃತಗೊಳಿಸಿ, ಕ್ಷೇತ್ರದ ಕೀರ್ತಿಯನ್ನು ಅಂತರಾಷ್ಟ್ರೀಯ ಮಟ್ಟಕ್ಕೇರಿಸಲು ಕಾರಣರಾಗಿರುವುದು ಶಿವ ಸಮುದಾಯದ ಸೌಭಾಗ್ಯ'', ಎಂದು ತಿಳಿಸಿದರು.

ಮತ್ತೊಬ್ಬ ಅತಿಥಿಗಳಾಗಿ ಆಗಮಿಸಿದ್ಧ ಡಾ : ಬಿ. ನಂಜುಂಡಸ್ವಾಮಿಯವರು ಶಿವಯೋಗಿಗಳ ಕಾರ್ಯಕ್ಷೇತ್ರ ಗುಬ್ಬಿಯಲ್ಲಿ ಪ್ರಾರಂಭವಾದರೂ ಸಿದ್ಧಗಂಗೆಯಲ್ಲಿ ಅದು ಅರಳಿತು. ಉದ್ದಾನ ಶಿವಯೋಗಿಗಳಂತ ಮಹಾನುಭಾವರನ್ನು ಶ್ರೀಮಠಕ್ಕೆ ನೀಡಿತು ಎಂದು ಹೇಳಿದರು.

## ಶಿಕ್ಷಕರ ಮಹಾಸಮ್ಮೇಳನ

೧೩.೧.೨೦೦೧ರ ಮಧ್ಯಾಹ್ನ ೩.೦೦ ಘಂಟೆಯಿಂದ ಪ್ರಾರಂಭವಾದ ಸಿದ್ಧಗಂಗಾ ವಿದ್ಯಾಸಂಸ್ಥೆಯು ಶಿಕ್ಷಕರ ಮಹಾ



ಶಿಕ್ಷಕರ ಮಹಾಸಮ್ಮೇಳನದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ ಅವರು ಉಪನ್ಯಾಸ ಮಾಡುತ್ತಿರುವುದು. ವೇದಿಕೆಯಲ್ಲಿ ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಚಾರ್ಯರೂ, ಹಳೆಯ ವಿದ್ಯಾರ್ಥಿಗಳ ಸಂಘದ ಪ್ರಧಾನ ಕಾರ್ಯದರ್ಶಿಗಳೂ ಆದ ಡಾ. ಎಂ.ಎನ್ ಚೆನ್ನಬಸಪ್ಪನವರು, ಪ್ರಸಿದ್ಧ ಕವಿಗಳು, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು, ಶಿಕ್ಷಣ ತಜ್ಞರಾದ ಶ್ರೀ ಬ್ರಹ್ಮಂ ಅವರು, ಪರಮ ಪೂಜ್ಯ ಶ್ರೀ ಶ್ರೀಗಳವರು, ದೇಗುಲ ಮಠದ ಶ್ರೀ ಶ್ರೀಗಳು, ಶ್ರೀಮಠದ ಕಿರಿಯ ಶ್ರೀ ಶ್ರೀಗಳು ಹಾಗೂ ಶಾಸಕ ಶ್ರೀ ಎಸ್. ಚೆನ್ನಬಸವಯ್ಯನವರನ್ನು ಕಾಣಬಹುದು.

ಸಮ್ಮೇಳನದಲ್ಲಿ ಆಶೀರ್ವಚನ ನೀಡಿದ ಪರಮ ಪೂಜ್ಯ ಶ್ರೀಗಳವರು ''ಶಿಕ್ಷಕ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವುದರ ಮೂಲಕ ವಿದ್ಯಾರ್ಥಿಗಳಿಗೆ ಸಮಾಜಕ್ಕೆ ಮಾರ್ಗದರ್ಶಕನಾಗಬೇಕು. ಶೀಲಸಂಪತ್ತಿನ ಪವಿತ್ರ ಜೀವಿಯಾಗಬೇಕು, ರಾಷ್ಟ್ರ ನಿರ್ಮಾಣ ಶಿಕ್ಷಕ ಮತ್ತು ತಾಯಿ ಇಂದ ಮಾತ್ರ ಸಾಧ್ಯ'' ಎಂಬುದನ್ನು ಸ್ಪಷ್ಟಪಡಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶಾಸಕ ಶ್ರೀ ಎಸ್. ಚೆನ್ನಬಸವಯ್ಯನವರು ''ಪರಮಪೂಜ್ಯರು ಬಹುದೊಡ್ಡ ಶಿಕ್ಷಣ ತಜ್ಞರು ಎಂದು ಪ್ರಶಂಸಿಸುತ್ತಾ; ಪರಿಸರ ಮೂಲಭೂತ ಅವಶ್ಯಕತೆಗಳು ಶಿಕ್ಷಣತಜ್ಞನಿಗಿರಬೇಕು ದುರ್ದೈವ ವೆಂದರೆ ಇಂದಿನ ಶಿಕ್ಷಣ ಸಚಿವರು, ಅಧಿಕಾರಿಗಳು ಹಾಗೂ ಸರ್ಕಾರ ಮಾಡುತ್ತಿರುವ ಆಲೋಚನೆಯ ದಿಕ್ಕು ಬದಲಾಗಬೇಕು'' ಎಂದರು.



ಶಾಸಕ ಶ್ರೀ ಎಸ್. ಚೆನ್ನಬಸವಯ್ಯನವರಿಂದ ಭಾಷಣ

ಮತ್ತೊಬ್ಬ ಅತಿಥಿಗಳಾದ ಪ್ರಸಿದ್ಧ ಸಾಹಿತಿ ಹಾಗೂ ಕನ್ನಡ ಸಾಹಿತ್ಯ ಪರಿಷತ್ ಮಾಜಿ ಅಧ್ಯಕ್ಷರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಅವರು ''ಡಾ. ರಾಧಾಕೃಷ್ಣನ್ ಅವರಂತ ಮೇಧಾವಿ ಶಿಕ್ಷಕರಿಂದ ಅತ್ಯುತ್ತಮ ವಿದ್ಯಾರ್ಥಿಲೋಕ ನಿರ್ಮಾಣವಾಯಿತು. ಇಂದು ಉತ್ತಮ ವಿದ್ಯಾರ್ಥಿ ಲಭ್ಯವಾಗುವುದು ಶಿಕ್ಷಕರ ಭಾಗ್ಯ, ಶಿಕ್ಷಕ ಶ್ರದ್ಧೆಯುಳ್ಳವನಾಗಬೇಕು. ಜ್ಞಾನದಾಹಿಯಾಗಬೇಕು, ಉತ್ತಮ ಸಮಾಜವನ್ನು ನಿರ್ಮಾಣ ಮಾಡು ವಂತ ಉತ್ಸಾಹಿಯಾಗಬೇಕು. ಅಂತಹುದು ಪರಮ ಪೂಜ್ಯ ಶ್ರೀ ಶ್ರೀಗಳವರಂತ ಶಿಕ್ಷಕ ತಜ್ಞರಿಂದ ಸಾಧ್ಯ'' ಎಂದರು.



ಶ್ರೀ ಬ್ರಹ್ಮಂ ಅವರಿಂದ ಉಪನ್ಯಾಸ

ಮತ್ತೊಬ್ಬ ಅತಿಥಿ ಪ್ರೊ. ಬ್ರಹ್ಮಂ ಅವರು ಶಿಕ್ಷಕನಿಗೆ ಸಂಕಲ್ಪ, ಸಂದಿಗ್ಧತೆ, ಸದ್ಭಾವ, ಸಮಾಲೋಚನೆಗಳಂತ ಗುಣಗಳು ಅತ್ಯಂತ ಅಗತ್ಯ ಎನ್ನುವುದರ ಜೊತೆಗೆ ಶಿಕ್ಷಕನಾದವನು ಒಳ್ಳೆಯದನ್ನು ತನ್ನ ವಿದ್ಯಾರ್ಥಿಗೆ ಕೊಡುವುದು ಸಾಧ್ಯವಾಗದೇ ಹೋದರೆ ಕೆಟ್ಟದ್ದನ್ನು ಕೊಡು ವುದಕ್ಕೆ ಅವನಿಗೆ ಯಾವ ಹಕ್ಕು ಇಲ್ಲ'' ಎಂಬುದಾಗಿ ಸಂಸ್ಕೃತ ಶ್ಲೋಕಗಳೊಂದಿಗೆ ವಿವರಿಸಿದರು. ಸಿದ್ಧಗಂಗಾ ಮಾಸಪತ್ರಿಕೆ ಸಂಪಾದಕರಾದ ಪ್ರೊ. ಎಚ್.ವಿ. ವೀರಭದ್ರಯ್ಯರವರು ಕಾರ್ಯಕ್ರಮ ನಿರೂಪಿಸಿದರು.





# ಪೂಜ್ಯ ಶ್ರೀ ಶ್ರೀ ಉದ್ಧಾನ ಶಿವಯೋಗಿಗಳ 60ನೆಯ ಪುಣ್ಯಾರಾಧನೆ ಹಾಗೂ ಗ್ರಾಮಾಂತರ ಬಸವಜಯಂತಿ ವಾರ್ಷಿಕ ಸಮಾರೋಪ



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಪೂಜ್ಯಶ್ರೀ ಶ್ರೀ ಉದ್ಧಾನ ಶಿವಯೋಗಿಗಳ ೬೦ನೇ ಪುಣ್ಯಾರಾಧನೆ ಮತ್ತು ಗ್ರಾಮಾಂತರ ಬಸವಜಯಂತಿ ಕಾರ್ಯಕ್ರಮದ ಉದ್ಘಾಟನೆ

ದಿನಾಂಕ ೧೪.೧.೨೦೦೧ರಂದು ನಡೆದ ಲಿಂ. ಉದ್ಧಾನ ಶಿವಯೋಗಿಗಳ ೬೦ನೆಯ ಪುಣ್ಯಾರಾಧನೆ ಪರಮಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಶ್ರೀ ಶ್ರೀಗಳವರು ತಮ್ಮ ಗುರುಗಳನ್ನು ಸ್ಮರಿಸುತ್ತಾ ''ಪೂಜ್ಯ ಉದ್ಧಾನ ಗುರುಗಳ ದಿವ್ಯದೃಷ್ಟಿ ಅತ್ಯದ್ಭುತವಾದುದು. ಅವರು ಹೆಚ್ಚು ಓದಿದವರಲ್ಲ, ಹೆಚ್ಚು ಜೀವನವನ್ನು ಕಂಡವರು, ಪರೋಪಕಾರದಲ್ಲಿ ಆಧ್ಯಾತ್ಮವನ್ನು ಪ್ರಜ್ವಲಿಸಿದವರು, ಅವರಿಗೆ ಜಾತಿ ಮುಖ್ಯವಾಗಿರಲಿಲ್ಲ, ಮಾನವೀಯತೆ ಮುಖ್ಯವಾಗಿತ್ತು. ಸಂಸ್ಕೃತಾಭ್ಯಾಸವನ್ನು ಎಲ್ಲ ವರ್ಗದವರಿಗೆ ಮುಕ್ತವಾಗಿ ಅವಕಾಶಕಲ್ಪಿಸಿಕೊಟ್ಟ ಜಾತ್ಯಾತೀತರು ಅವರು. ಪ್ರತಿಯೊಬ್ಬ ವ್ಯಕ್ತಿ ದುಡಿದೇ ಊಟಮಾಡಬೇಕು ಎಂಬ ತತ್ವವನ್ನು ಅಕ್ಷರತಃ ಆಚರಿಸಿ ತೋರಿಸಿದವರು, ಅವರ ಸ್ಮರಣೆ ಶ್ರೀಮಠದ ಮಹಾಶಕ್ತಿ ಎಂದು ನುಡಿದರು.

ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ. ಡಿ.ವಿ. ಪರಶಿವಮೂರ್ತಿ ಅವರು 'ಗುರುಮಠ, ವಿರಕ್ತಮಠ, ಸಿದ್ಧಗಂಗಾಮಠ' ಎಂಬ ವಿಷಯವನ್ನು ಕುರಿತು ಮಾತನಾಡುತ್ತಾ ಸಿದ್ಧಗಂಗಾಮಠದ ಸೇವಾಜೀವನ ಮಾರ್ಗವನ್ನು ಅನೇಕ ಮಠಗಳು ಅದರಲ್ಲೂ ಗುರುವರ್ಗದ ಮಠಗಳು ಅನುಸರಿಸುತ್ತಾ ಬಂದುದನ್ನು ವಿವರಿಸಿದರು. ಮಠಗಳು ಜನಮಧ್ಯದಲ್ಲಿದ್ದುಕೊಂಡು, ಜನರನ್ನು ಮೇಲೆತ್ತುವ ಕೆಲಸ ಮಾಡಿದವು ಎಂದು ನುಡಿದರು. ಮತ್ತೊಬ್ಬ ಉಪನ್ಯಾಸಕರಾದ ಜೈನ್

ಸಮಾರಂಭದಲ್ಲಿ ಕಿಕ್ಕಿರಿದ ಭಕ್ತರ ಸಮೂಹ

ಇನ್ಸ್ಟಿಟ್ಯೂಟ್ ಆಫ್ ವೆಕೇಷನಲ್ ಸೆಂಟರ್‌ನ ನಿರ್ದೇಶಕರಾದ ಡಾ. ಡಿ.ಪಿ. ಪ್ರಕಾಶ್‌ಅವರು ಸಂಕ್ರಾತಿ ನಿಸರ್ಗದ ಸಹಜ ಕ್ರಿಯೆ. ಈ ಪುಣ್ಯದಿನದಂದು ಬಸವ ಕಲ್ಯಾಣದಲ್ಲಿ ನಡೆಯುವುದರ ಮೂಲಕ ಇಡೀ ಜಗತ್ತಿಗೂ ಚಿಂತನಧಾರೆ ಯನ್ನೇ ಬದಲಾಯಿಸಿತು. ಪ್ರಭುದೇವರ ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸ ವೆಂಬ ತೈಲವನೆರೆದು ಆಚಾರವೆಂಬ ಭಕ್ತಿಯ ನಿಕ್ಕೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತಿರ್ದುದಯ್ಯಾ ಶಿವನಪ್ರಕಾಶ ಎಂಬ ವಚನವನ್ನು ಪ್ರಸ್ತಾವಿಸಿ ಆ ಕ್ರಾಂತಿಯ ವೈಶಿಷ್ಟ್ಯತೆಯನ್ನು ವಿವರಿಸಿದರು.

ಮಧ್ಯಾಹ್ನದ ಅಧಿವೇಶನದಲ್ಲಿ ಬಸವಣ್ಣನವರ ಮಹೋನ್ನತ ವ್ಯಕ್ತಿತ್ವದ ಸಮಗ್ರ ಜೀವನವನ್ನು ಪರಮಪೂಜ್ಯ ಶ್ರೀಗಳು ಪರಿಚಯಿಸುತ್ತಾ ''ಬಸವಣ್ಣನವರು ಜಗತ್ತು ಕಂಡ ಮಹಾ ದಾರ್ಶನಿಕರು, ಆಧ್ಯಾತ್ಮವಿಜ್ಞಾನಿ, ಸಮಾಜ ಸುಧಾರಕ, ಆರ್ಥಿಕತಜ್ಞ, ಮಾನವತಾ ಪ್ರೇಮಿ, ಕಾಯಕ ದಾಸೋಹಗಳ ರೂವಾರಿ ಮಹಿಳೆಯರ ಬದುಕನ್ನು ಧ್ದರಿಸಿದ ಮಹಾನುಭಾವ'' ಎಂದು ನುಡಿದರು.

ಸಮಾರಂಭವನ್ನು ಉದ್ಘಾಟಿಸಿದ ಶ್ರೀ ಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು 'ಬಸವಣ್ಣನವರು ದಯಾಳು, ಜಾಗೃತ ಚೇತನ, ಎಲ್ಲ ಶರಣರ ಆತ್ಮೀಯ ಪ್ರಾಣ ಜೀವಾಳ' ಎನ್ನುತ್ತಾ ಕವಿ ಶಿವರುದ್ರಪ್ಪನವರ ಕವನವನ್ನು ಉದಾಹರಿಸಿದರು.

ವಿಧಾನಪರಿಷತ್ ಸದಸ್ಯರೂ, ಪ್ರಸಿದ್ಧ ಕವಿಗಳೂ ಆದ ಡಾ. ಸಿದ್ಧಲಿಂಗಯ್ಯ ಅವರು ''ನಿಜವಾದ ಪ್ರಜಾಪ್ರಭುತ್ವವನ್ನು ತರಲು ಪ್ರಯತ್ನಿಸಿದ ಮಹಾನುಭಾವ ಬಸವಣ್ಣ, ಕೆಳವರ್ಗದವರ ಜೀವನ ವನ್ನು ಉತ್ತಮಗೊಳಿಸುವ ಪ್ರಯತ್ನ ಬಸವಣ್ಣನವರದಾಗಿತ್ತು'' ಎಂದು ನುಡಿದರು.

ಅಧ್ಯಕ್ಷತೆ ವಹಿಸಿದ್ದ ಬೆಳಗಾವಿ ನಾಗನೂರು ಶ್ರೀ ರುದ್ರಾಕ್ಷಿಮಠದ ಪೂಜ್ಯ ಶ್ರೀ ಶ್ರೀ ಸಿದ್ಧರಾಮಸ್ವಾಮಿಗಳು ''ಸಂಕ್ರಾಂತಿಯ ಶುಭದಿನದಂದು ಪರಮ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಸಮಾಜಕ್ಕೆ ಕೊಟ್ಟ ಉದ್ದಾನ ಮಹಾ ಸ್ವಾಮಿಗಳವರ ಮಹಾ ವ್ಯಕ್ತಿತ್ವವನ್ನು ಗುಣಗಾನಮಾಡಿ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ೨೧ನೇ ಶತಮಾನದ ಬಸವಣ್ಣನವರೇ ಆಗಿದ್ದಾರೆಂದು'' ಶ್ಲಾಘಿಸಿದರು.

ಮೊದಲದಿನ ಕಾರ್ಯಕ್ರಮ ಪ್ರಾರಂಭಕ್ಕೆ ಮುನ್ನ ಲಿಂಗೈಕ್ಯ ಶ್ರೀ ಅಟವೀ ಭಾವಚಿತ್ರ ಪಲ್ಲಕ್ಕಿ ಉತ್ಸವ ಹಾಗೂ ಎರಡನೆಯ ದಿನ ಲಿಂಗೈಕ್ಯ ಶ್ರೀ ಉದ್ದಾನ ಶ್ರೀ ಶಿವಯೋಗಿಗಳ ಭಾವಚಿತ್ರ ಪಲ್ಲಕ್ಕಿ ಉತ್ಸವ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳ ನೇತೃತ್ವದಲ್ಲಿ ವೈಭವದಿಂದ ನಡೆಯಿತು.

ಎರಡು ದಿವಸಗಳು ನಡೆದ ಸಮಾರಂಭಗಳಲ್ಲಿ ರಾಷ್ಟ್ರೀಯ ಖ್ಯಾತಿ ಪಡೆದಿರುವ ಶ್ರೀ ಹೆಚ್.ಎಸ್. ನೀಲಕಂಠಯ್ಯ ಮತ್ತು ತಂಡದವರ ವೀರಗಾನನೃತ್ಯ ಸಮಾರಂಭದಲ್ಲಿ ಹೆಚ್ಚ ಕಳೆ ತಂದು ಕೊಟ್ಟಿತು.

– ವರದಿ : ಎಂ. ರೇಣುಕಾರಾಧ್ಯ

''ನಾವು ಒಬ್ಬರನ್ನೊಬ್ಬರು ಕೊಲ್ಲುವುದನ್ನು ಬಿಟ್ಟಲ್ಲಿ ಪುರಾಣಗಳಲ್ಲಿಯೂ, ಇತಿಹಾಸದಲ್ಲೂ ಕರ್ಮಭೂಮಿಯೆಂದು ಪ್ರಸಿದ್ಧಿ ಪಡೆದಿರುವ ಈ ನಾಡು ಸಗ್ಗವಾದೀತು.''

– ಗಾಂಧೀಜಿ





## ಶ್ರೀ ಕ್ಷೇತ್ರದಲ್ಲಿ ಗಣರಾಜ್ಯೋತ್ಸವ

''ಮಕ್ಕಳು ಮತ್ತು ಯುವಕರು ದೇಶಾಭಿಮಾನ ಬೆಳೆಸಿ ಕೊಳ್ಳುವುದರ ಜೊತೆಗೆ ದೇಶದ ಸುಭದ್ರತೆ ಕಾಪಾಡ ಬೇಕು'' ಎಂದು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ನುಡಿದರು.

ದಿನಾಂಕ ೨೬-೧-೨೦೦೧ ಶುಕ್ರವಾರ ದಂದು ಬೆಳಿಗ್ಗೆ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ 52ನೇ ಗಣರಾಜ್ಯೋತ್ಸವ ಸಮಾರಂಭದ ಅಧ್ಯಕ್ಷತೆ ವಹಿಸಿ ಆಶೀರ್ವಚನ ನೀಡುತ್ತಿದ್ದ ಶ್ರೀಗಳು ''ಇಂದು ನಮ್ಮ ದೇಶ ಬಹಳ ಸೂಕ್ಷ್ಮವಾದ ಮತ್ತು ಗಂಭೀರವಾದ ಸವಾಲುಗಳನ್ನು ಮತ್ತು ಸಮಸ್ಯೆಗಳನ್ನು ಎದುರಿಸು ತ್ತಿದೆ. ತಾವುಗಳು ಇದನ್ನು ಅರಿತು ಅದರ ಪರಿಹಾರ ನಿವಾರಣೆಗೆ ಪ್ರಯತ್ನಿಸು ವಂತಹ ಮನೋಭಾವನೆ ಬೆಳೆಸಿಕೊಳ್ಳುವುದರ ಜೊತೆಗೆ ೨೧ಶತಮಾನದ ಹೊಸ್ತಿಲಲ್ಲಿರುವ ನಾವು ತಂತ್ರಜ್ಞಾನ ಮತ್ತು ವಿಜ್ಞಾನ ಯುಗಕ್ಕೆ ಸ್ಪಂದಿಸುವಂತಹ ರೀತಿಯಲ್ಲಿ ಶಿಕ್ಷಣ ಪಡೆಯಬೇಕು. ಸ್ಪರ್ಧಾತ್ಮಕ ಜಗತ್ತಿನಲ್ಲಿ ಅದಕ್ಕೆ ಹೊಂದಿಕೊಂಡು ಹೋಗುವ ಸ್ಪರ್ಧಾಮನೋಭಾವನೆ ಬೆಳೆಸಿಕೊಳ್ಳಬೇಕು ಎಂದು ಕರೆನೀಡಿದರು.

ತುಮಕೂರು ವಿಧಾನಸಭಾ ಸದಸ್ಯರಾದ ಶ್ರೀ ಎಸ್. ಶಿವಣ್ಣನವರು ಧ್ವಜಾ ರೋಹಣ ಮತ್ತು ವಂದನಾ ಸ್ವೀಕಾರ ಮಾಡಿ ನಂತರ ಮಾತನಾಡುತ್ತಾ ''ಇಂದು ಭಾರತ ದೇಶ ಮುಂದುವರಿದ ದೇಶಗಳ ಸಾಲಿನಲ್ಲಿ ಸೇರುವಂತಹ ಹೆಗ್ಗಳಿಕೆಯನ್ನು ಪಡೆದುಕೊಂಡಿದೆ. ಇಂತಹ ಪರ್ವಕಾಲದಲ್ಲಿ ಮಕ್ಕಳಾದ ನೀವು ಉತ್ತಮಶಿಕ್ಷಣ, ಸಂಸ್ಕಾರ ಪಡೆದು ಸದೃಢ ಭಾರತವನ್ನು ಕಟ್ಟಲು ಪಣತೊಡಬೇಕು. ನಮ್ಮ ದೇಶದ ಸ್ವಾತಂತ್ರ್ಯಕ್ಕೆ ತ್ಯಾಗ, ಬಲಿದಾನ, ಮಾಡಿದ ಆದರ್ಶ ಮಹಾಪುರುಷರ ಜೀವನವನ್ನು ನಮ್ಮ ಜೀವನದಲ್ಲಿ ಅಳವಡಿಸಿ ಕೊಳ್ಳ ಬೇಕು'' ಎಂದು ಹಿತವಚನ ನೀಡಿದರು.

ತುಮಕೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ಕೆ. ಜನಾರ್ದನ ರಾವ್ ಅವರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡುತ್ತಿರುವುದು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಶಾಸಕರಾದ ಶ್ರೀ ಎಸ್. ಶಿವಣ್ಣ ಅವರು ಹಾಗೂ ಶ್ರೀಮಠದ ಆಡಳಿತಾಧಿಕಾರಿ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರು ಉಪಸ್ಥಿತರಿದ್ದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ತುಮಕೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ಕೆ. ಜನಾರ್ಧನರಾವ್ ಅವರು ಮಾತನಾಡಿ ''ಶಿಕ್ಷಣದ ಜೊತೆಗೆ ಸಂಸ್ಕಾರ, ಮಾನವೀಯತೆ ಮತ್ತು ಬದುಕುವ ಕಲೆಯನ್ನು ಕಲಿಸುತ್ತಿರುವ ಶ್ರೀಕ್ಷೇತ್ರ, ಆಧುನಿಕ ಗುರುಕುಲವಾಗಿದೆ. ದೇಶಾಭಿಮಾನ ಬೆಳೆಸಿಕೊಳ್ಳಬೇಕು. ದೇಶದ ವರ್ತಮಾನದ ಹಾಗುಹೋಗುಗಳನ್ನು ಅರಿತುಕೊಳ್ಳಬೇಕು ಎಂದು ತಿಳಿಸಿದರಲ್ಲದೆ, ಶ್ರೀಗಳವರ ಸೇವಾಮಣಿಹವನ್ನು ಅರಿತು ಕೊಂಡು ಭಾರತ ಸುಗಂಧ ಕುಸುಮಗಳಾಗ ಬೇಕು ಎಂದು ತಿಳಿಸಿದರು. ಧ್ವಜಾರೋಹಣದ ನಂತರ ಶಾಲಾಕಾಲೇಜುಗಳ ವಿದ್ಯಾರ್ಥಿಗಳು ಹಾಗೂ ಎನ್.ಸಿ.ಸಿ. ಸ್ಕೌಟ್ ವಿದ್ಯಾರ್ಥಿಗಳಿಂದ ಪಥಸಂಚಲನ ಮತ್ತು ಆಕರ್ಷಕ ಕವಾಯಿತು ಪ್ರದರ್ಶನ ನಡೆಯಿತು.

ಶ್ರೀ ಕ್ಷೇತ್ರದಲ್ಲಿರುವ ವಿವಿಧ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಗಳಿಂದ ವೈವಿಧ್ಯಮಯ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಅದರಲ್ಲೂ ವಿಶೇಷವಾಗಿ ಬಸವೇಶ್ವರ ಆಂಗ್ಲ ಪ್ರಾಥಮಿಕ ಶಾಲೆಯ ಪುಟಾಣಿಗಳು ಶ್ರೀ ಸಿದ್ಧಲಿಂಗೇಶ್ವರ ಪ್ರಾಥಮಿಕ ಪಾಠಶಾಲೆ ಮತ್ತು ಶ್ರೀ ಸಿದ್ಧಲಿಂಗೇಶ್ವರ ಅಂಧಮಕ್ಕಳ ಪಾಠಶಾಲೆಯ ಮಕ್ಕಳು ನೀಡಿದ ಕಾರ್ಯಕ್ರಮ ಮನಮೋಹಕವಾಗಿತ್ತು. ಪ್ರೌಢಶಾಲೆ ವಿದ್ಯಾರ್ಥಿಗಳು ಶಿಕ್ಷಕರ ತರಬೇತಿ ಸಂಸ್ಥೆಯ ವಿದ್ಯಾರ್ಥಿಗಳು ನೀಡಿದ ರಾಷ್ಟ್ರಭಕ್ತಿ ಬಿಂಬಿಸುವ ಗೀತೆಗಳು ಪ್ರೇಕ್ಷಕರನ್ನು ಮನಸೂರೆಗೊಂಡವು. ಶ್ರೀ ಸಿದ್ಧಲಿಂಗೇಶ್ವರ ಪ್ರಾಥಮಿಕ ಪಾಠಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಜಿ.ಹೆಚ್. ಗಂಗಾಧರಯ್ಯನವರು ವಂದಿಸಿದರು. ಶ್ರೀ ಡಿ.ಎಸ್. ನಾಗರಾಜು ಅವರ ಕಾರ್ಯಕ್ರಮವನ್ನು ನಿರೂಪಣೆ ಮಾಡಿದರು.

★ ವರದಿ : ಕೆ.ಬಿ. ಶಿವಶಂಕರಯ್ಯ

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೭೧. | **ಶ್ರೀ ಎಂ.ಸಿ. ಮಲ್ಲೇಶ**<br>ವೆಟರ್‌ನಿಂಗ್ ಲೈವ್ ಸ್ಟಾಕ್ ಇನ್‌ಸ್ಪೆಕ್ಟರ್<br>ವೆಟರಿನರಿ ಡಿಸ್ಪೆನ್ಸರಿ<br>ವೆಂಕಟರಾಯರ ದೊಡ್ಡಿ<br>ಸಾತನೂರ್ ಹೋಬಳಿ – ೫೬೨೧೨೬<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | ೪,೮೫೧.೦೦ |
| ೩೭೨. | **ಶ್ರೀ ಎಚ್.ಸಿ. ಬಸವರಾಜು, ಬಿ.ಇ.,**<br>ನಂ. ೪೧೮, ೮ನೇ ಮೈನ್, ಮಲ್ಲೇಶ್ವರಂ ವೆಸ್ಟ್<br>ಕಿರ್ಲೋಸ್ಕರ್ ಹಿಂಬಾಗ<br>ವಿವೇಕಾನಂದ ಕಾಲೇಜು ಹತ್ತಿರ<br>ಬೆಂಗಳೂರು. | ೨,೫೦೦.೦೦ |
| ೩೭೩. | **ಶ್ರೀ ಕೆ.ಪಿ. ಪ್ರಭುಶಂಕರ್**<br>ಕಾರ್ಪೋರೇಟರ್, ೮ನೇ ಮುಖ್ಯರಸ್ತೆ<br>ಕೆ.ಆರ್. ನಗರ, ಮೈಸೂರು ಜಿಲ್ಲೆ | ೫,೦೦೧.೦೦ |
| ೩೭೪. | **ಶ್ರೀಮತಿ ಶಶಿಕಲಾ ಲೋಕೇಶ್**<br>ಶ್ರೀ ವೀರಭದ್ರೇಶ್ವರ ನಿಲಯ<br>ಶ್ರೀರಂಗ ಸ್ಕೂಲ್ ಹತ್ತಿರ<br>ಬಾಟವಾಡಿ, ತುಮಕೂರು – ೩. | ೧,೦೦೧.೦೦<br>(೧ನೇ ಕಂತು) |
| ೩೭೫. | **ಶ್ರೀ ಶಿವಣ್ಣ**<br>ಕೆಮಿಕಲ್ ಇಂಜಿನಿಯರಿಂಗ್ ವಿಭಾಗ<br>ಎಸ್.ಐ.ಟಿ. ತುಮಕೂರು – ೩ | ೧,೦೦೦.೦೦ |
| ೩೭೬. | **ಶ್ರೀ ಎನ್.ಆರ್. ಕುಮಾರಸ್ವಾಮಿ ಮತ್ತು ಮಕ್ಕಳು**<br>ನಂ. ೫೩, ಟಿ.ಡಿ. ಲೇನ್, ಕಾಟನ್‌ಪೇಟೆ<br>ಬೆಂಗಳೂರು – ೫೩ | ೧,೦೦೧.೦೦<br>(೨ನೇ ಕಂತು) |
| ೩೭೭. | **ಶ್ರೀಮತಿ ರತ್ನಮ್ಮ ಮತ್ತು ಮಕ್ಕಳು**<br>ಸಿದ್ಧಗಂಗಾ ಬಡಾವಣೆ<br>ಪಂಪ್ ಹೌಸ್ ಹತ್ತಿರ, ೬ನೇ ಕ್ರಾಸ್<br>ಮುನಿಸಿಪಲ್ ಲೇ ಔಟ್<br>ತುಮಕೂರು – ೫೭೨ ೧೦೨. | ೫,೦೦೧.೦೦ |
| ೩೭೮. | **ಶ್ರೀ ಎಸ್. ಚೆನ್ನಬಸವಯ್ಯ**<br>ನಂ. ೪, ೨ನೇ ಕ್ರಾಸ್, ಹುಚ್ಚಪ್ಪ ಲೇ ಔಟ್<br>ಮೂಡಲಪಾಳ್ಯ, ಶಾಂತವೀರಿ ಗೋಪಾಲನಗರ<br>ಬೆಂಗಳೂರು – ೭೨. | ೧,೧೦೧.೦೦<br>(೧ನೇ ಕಂತು) |
| ೩೭೯. | **ಶ್ರೀ ಎಂ.ಆರ್..ಬೈಲಪ್ಪ, ಟೀಚರ್**<br>ಡಾ. ಎಚ್. ನರಸಿಂಹಯ್ಯ, ನ್ಯಾಷನಲ್ ಹೈಸ್ಕೂಲ್<br>ಹೊಸೂರು – ೫೬೧೨೧೦, ಗೌರಿಬಿದನೂರು ತಾ॥<br>ಕೋಲಾರ ಜಿಲ್ಲೆ. | ೫,೦೦೧.೦೦ |
| ೩೮೦. | **ಶ್ರೀ ಬಿ.ಎಸ್. ಕೃಪಾಶಂಕರ್**<br>ನಂ. ೮೩, ೩೪ನೇ 'ಬಿ' ಕ್ರಾಸ್<br>೧೧ನೇ ಮೈನ್, ಜಯನಗರ<br>ಬೆಂಗಳೂರು – ೫೬೦ ೦೪೧. | ೩,೦೦೧.೦೦ |
| ೩೮೧. | **ಶ್ರೀ ಬಿ. ಜಯಣ್ಣ**<br>ಸನ್ ಆಫ್ ಲೇಟ್ ಬೋರೇಗೌಡ ಮತ್ತು<br>ಶ್ರೀಮತಿ ಚೆನ್ನವೀರಮ್ಮ, ಬೆಳಗೆರೆ<br>ಹೆಬ್ಬೂರು ಹೋಬಳಿ, ತುಮಕೂರು ತಾ॥ | ೧,೦೦೦.೦೦<br>(೨ನೇ ಕಂತು) |
| ೩೮೨. | **ಶ್ರೀ ಕಿರಣ್ ಆರ್. ಪುಟ್ಟಬುದ್ಧಿ**<br>ನಂ. ೫೩೪೫, ಗ್ರೇಟ್ ಓಕ್ ಡ್ರೈವ್<br>ಅಪಾರ್ಟ್‌ಮೆಂಟ್ – ಎಮ್, ಕೊಲಂಬಸ್ –<br>ಒಎಚ್–೪೩ ೨೧೩, ಯು.ಎಸ್.ಎ. | ೧,೦೦೦.೦೦<br>(ಒಂದು ಸಾವಿರ ಪೌಂಡ್ಸ್) |
| ೩೮೩. | **ಶ್ರೀ ಎಮ್. ವೃಷಭಯ್ಯ**<br>ವಿ. ಮಂಜುನಾಥ, ವಿ. ಗಂಗಾಧರ್ ಮತ್ತು ಕುಟುಂಬ<br>ನಂ. ೨೮೪೧/೧, ೬ನೇ ಕ್ರಾಸ್, ವಿ.ಎಸ್. ಮೋಹಲ್ಲಾ<br>ಮೈಸೂರು – ೫೭೦ ೦೦೨. | |
| ೩೮೪. | **ಶ್ರೀ ಎನ್.ಎಸ್. ನಾರಾಯಣಪ್ಪ**<br>ರಿಟೈರ್ಡ್ ಅಕೌಂಟ್ಸ್ ಆಫೀಸರ್, (ಕೆ.ಇ.ಬಿ.)<br>ನಳಂದ ಸ್ಕೂಲ್ ಹತ್ತಿರ, ರಾಘವೇಂದ್ರ ನಗರ<br>ತುಮಕೂರು – ೨. | ೧,೦೦೦.೦೦<br>(೨ನೇ ಕಂತು) |

(ಮುಂದುವರಿಯುತ್ತದೆ)





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೭೯. | **ಶ್ರೀ ಹೆಚ್.ಡಿ. ಚಂದ್ರಯ್ಯ**<br>ದೈಹಿಕ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜು<br>ಹಾಲನೂರು, ತುಮಕೂರು ತಾ॥ | ೧,೦೦೧.೦೦ |
| ೩೮೦. | **ಶ್ರೀ ಶಿವಣ್ಣ ಮತ್ತು ಶ್ರೀಮತಿ ಶಿವಮ್ಮ ಮತ್ತು ಮಕ್ಕಳು**<br>ದಾಸೇನಹಳ್ಳಿ, ನಿಡವಂದ ಅಂಚೆ<br>ನೆಲಮಂಗಲ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | ೨,೫೦೧.೦೦ |
| ೩೮೧. | **ಶ್ರೀ ಕೆ. ಸಿದ್ಧಗಂಗಯ್ಯ**<br>ನಿವೃತ್ತ ಪ್ರಾಂಶುಪಾಲರು<br>ನಂ. ೯೫೯, ೨ನೇ ಮುಖ್ಯರಸ್ತೆ, ೪ನೇ ಕ್ರಾಸ್<br>ಜಯನಗರ<br>ಬೆಂಗಳೂರು – ೫೬೦ ೦೬೯. | ೧,೦೦೧.೦೦ |
| ೩೮೨. | **ಶ್ರೀ ಎನ್.ವಿ. ಕೃಷ್ಣಮೂರ್ತಿ**<br>ನಂ. ೫೨/೫೦, ೧ನೇ ಕ್ರಾಸ್<br>೨೦ನೇ ಮುಖ್ಯರಸ್ತೆ, ವಿಜಯನಗರ<br>ಬೆಂಗಳೂರು – ೪೦. | ೧,೦೦೧.೦೦ |
| ೩೮೩. | **ಶ್ರೀ ಬಿ.ಎಲ್. ಚಂದ್ರಶೇಖರಯ್ಯ**<br>ಮುಖ್ಯ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೮೪. | **ಶ್ರೀ ಕೆ.ಆರ್. ವೀರಭದ್ರಯ್ಯ**<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೮೫. | **ಶ್ರೀ ದೊಡ್ಡನಾಗಯ್ಯ**<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೮೬. | **ಶ್ರೀ ರಮೇಶ್ ಟಿ. ಹರಿಜನ್**<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೮೭. | **ಶ್ರೀ ಎಂ. ಶಾಂತಕುಮಾರ**<br>ವೃತ್ತಿ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೮೮. | **ಶ್ರೀ ಡಿ.ಬಿ. ರುದ್ರಪ್ಪ**<br>ಸಂಗೀತ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಕ್ಷೇತ್ರ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೮೯. | **ಶ್ರೀ ಸಂಜೀವ ಫಕೀರಪ್ಪ ಕೇರದಾಳ**<br>ವೃತ್ತಿ ಶಿಕ್ಷಕರು ಶ್ರೀ ಸಿದ್ಧಗಂಗಾ ಅಂಧಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧೦೦೧.೦೦ |
| ೩೯೦. | **ಕೆ.ಎಂ. ಶಿವಕುಮಾರ ಸ್ವಾಮಿ**<br>''ಡಿ'' ಗ್ರೂಪ್ ನೌಕರರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |

(ಮುಂದುವರಿಯುತ್ತದೆ)

ಸ್ಥಾಪನೆ : 1995 ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ ದೂರವಾಣಿ : 77267

# ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ. ಹೆಚ್. ರಸ್ತೆ, ತುಮಕೂರು - 572102

**ಪ್ರಗತಿ ನೋಟ (31-3-2000 ರಲ್ಲಿದ್ದಂತೆ)**

(ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಷೇರು ಬಂಡವಾಳ | 75.70 | ದುಡಿಯುವ ಬಂಡವಾಳ | 1441.99 |
| ಕಾಯ್ದಿರಿಸದ ನಿಧಿಗಳು | 44.89 | ಸಾಲಗಳು ಮತ್ತು ಮುಂಗಡ | 969.78 |
| ಠೇವಣಿಗಳು | 1321.40 | | |

ಅಧ್ಯಕ್ಷರು : ಶ್ರೀ ಟಿ. ಕೆ. ನಂಜುಂಡಪ್ಪ ಉಪಾಧ್ಯಕ್ಷರು : ಶ್ರೀ ಕೆ. ಎಸ್. ಶಂಕರಯ್ಯ

**ನಿರ್ದೇಶಕ ಮಂಡಲಿ**

ಶ್ರೀ ಪಿ.ಎಸ್. ಪುಟ್ಟಶಂಕರಯ್ಯ
ವಿದ್ವಾನ್ ಕೆ.ಎಸ್. ಶಿವನಂಜಯ್ಯ
ಶ್ರೀ ಜಿ.ಆರ್. ಶಿವಕುಮಾರ್
ಶ್ರೀ ಸಿ.ಎಸ್. ರಾಮದಾಸ್
ಶ್ರೀ ಜಿ. ಲಿಂಗಣ್ಣ
ಶ್ರೀ ವಿ.ಸಿ. ಉಮೇಶ್‌ಚಂದ್ರ
ಶ್ರೀ ಎಸ್. ರಾಜಣ್ಣ
ಶ್ರೀ ಹೆಚ್.ಡಿ. ಸೋಮಶೇಖರ್
ಶ್ರೀ ಎಂ.ಪಿ. ಸದಾಶಿವಯ್ಯ
ಶ್ರೀಮತಿ ಶಿವಲಿಂಗಮ್ಮ
ಶ್ರೀ ಲಕ್ಷ್ಮಯ್ಯ

ಪ್ರಭಾರ ವ್ಯವಸ್ಥಾಪಕರು : ಕು|| ಬಬೀತ

**ಹಾರ್ದಿಕ ಶುಭಾಶಯಗಳೊಂದಿಗೆ** (ಸ್ಥಾಪನೆ : 1982)

# ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1320 |
| ಷೇರು ಮೊಬಲಗು | : | ರೂ. 26,36,500.00 |
| ವಾರ್ಷಿಕ ವಹಿವಾಟು | : | ರೂ. 3 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 11% |
| | : | 1 ವರ್ಷದಿಂದ 3 ವರ್ಷಕ್ಕೆ 12% |
| | : | 3 ವರ್ಷದಿಂದ 5 ವರ್ಷಕ್ಕೆ 13% |
| | : | 5 ವರ್ಷಕ್ಕೆ ಮೇಲ್ಪಟ್ಟು 14% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 1,00,000.00 ಗಳವರೆಗೆ |

ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ
ಅಧ್ಯಕ್ಷರು

ಡಾ|| ಶಿವಕುಮಾರಯ್ಯ
ಉಪಾಧ್ಯಕ್ಷರು



# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಆಡಳಿತ ಕಛೇರಿ :
ನಂ. 1732/32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ,
ವಿಜಯನಗರ, ಬೆಂಗಳೂರು-560 040.
☽ : 3358017, 3307070

ಮುಖ್ಯ ಶಾಖೆ :
ನಂ.1, ಅಕ್ಕಿಪೇಟೆ, ಬೆಂಗಳೂರು - 53.
☽ : 2282224, 2871003,

ಗಣಕೀಕೃತ ಶಾಖೆಗಳು :

ನಂ. 265/ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ✆ : 6541983
ನಂ. 391/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ✆ : 3402145
ನಂ. 1732/32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ, ವಿಜಯನಗರ, ಬೆಂಗಳೂರು-560 040. ✆ : 3358017, 3307070
ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ✆ : 3485393.

❖ ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
❖ ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.
❖ ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

*(31-03-2000ಕ್ಕೆ) (ಲಕ್ಷ ರೂ.ಗಳಲ್ಲಿ)*

| | | | | | |
|---|---|---|---|---|---|
| ಷೇರು ಬಂಡವಾಳ | : | 154.70 | ಹೂಡಿಕೆಗಳು | : | 1836.23 |
| ಸಾಲಗಳು ಮತ್ತು ಮುಂಗಡ | : | 2786.23 | ದುಡಿಯುವ ಬಂಡವಾಳ | : | 4442.56 |
| ಠೇವಣಿಗಳು | : | 4046.00 | ಕಾಯ್ದಿಟ್ಟ ಹಾಗೂ ಇತರೆ ನಿಧಿಗಳು | : | 241.86 |
| | | | ನಿವ್ವಳ ಲಾಭ | : | 60.02 |

ಶ್ರೀ ಆರ್. ನೀಲಕಂಠಯ್ಯ
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಎಸ್. ಪರಮಶಿವಯ್ಯ
ಶ್ರೀ ವೈ.ಟಿ. ಮಹಾದೇವಪ್ಪ
ಶ್ರೀ ಬಿ.ಜಿ. ನಾಗಬಸಪ್ಪ
ಡಾ. ಮಲ್ಲಿಕಾರ್ಜುನ
ಶ್ರೀ. ಜಿ. ಶಿವಕುಮಾರ್
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ
ಶ್ರೀ ಆರ್.ಜಿ. ಶಿವಕುಮಾರ್
ಶ್ರೀ ಬಿ.ಎಸ್. ಬಾಲರಾಜ್
ಶ್ರೀ ಎನ್.ಎಸ್. ಶಿವಶಂಕರ್
ಶ್ರೀ ಕೆ.ಆರ್. ರಾಮಯ್ಯ
ಶ್ರೀಮತಿ ಜಿ.ಎನ್. ಚಂದ್ರಾವತಿ ಬಿ.ಟಿ. ಉಮೇಶ್

ಪ್ರಧಾನ ವ್ಯವಸ್ಥಾಪಕರು
ಶ್ರೀ ಬಿ.ವಿ. ನಾಗರಾಜ

RNI No. 17139/69 "Siddaganga" Monthly - postal Reg.No. KA/SK/TMR/385/2001

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ಜನವರಿ ೨೮ರಂದು ರಾಷ್ಟ್ರೀಯ ಸ್ವಯಂ ಸೇವಾ ಸಂಘದ ಸರಸಂಘ ಚಾಲಕ ಶ್ರೀ ಕು.ಸಿ. ಸುದರ್ಶನ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯರ ದರ್ಶನಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು